


# ಸಪ್ತಗಿರಿ

ಬೆಲೆ: ರೂ ೧

ಡಿಸೆಂಬರ್ 1986

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಬಾರಯ್ಯ ವೆಂಕಟರಮಣ ಭಕ್ತರನಿಧಿಯೆ ॥ ಪ ॥
ತೋರಯ್ಯ ನಿನ್ನ ದಯೆ ತೋಯಜಾಂಬಕನೆ ॥ ಅ. ಪ ॥

ವೇದ ಗೋಚರ ಬಾರೋ
ಆದಿ ಕಚ್ಛಪ ಬಾರೋ
ಮೋದ ಸೂಕರ ಬಾರೋ
ಸದಯ ನರಸಿಂಹ ಬಾರೋ 1

ಪಾವನ ಭಾರ್ಗವ ಬಾರೋ
ರಾಮ ಕೃಷ್ಣನೆ ಬಾರೋ
ಪ್ರೇಮ ಬುದ್ಧನೆ ಬಾರೋ
ಸ್ವಾಮಿ ಕಲ್ಕಿಯೆ ಬಾರೋ 2

ಅರವಿಂದ ನಾಭನೆ ಬಾರೋ
ಸುರರ ಪ್ರಭುವೆ ಬಾರೋ
ಪುರಹೂತ ವಂದ್ಯ ಬಾರೋ
ಪುರಂದರ ವಿಠಲ ಬಾರೋ 3

—ಶ್ರೀ ಪುರಂದರದಾಸರು.

ಸಂದರ್ಶಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರ.

## ವಾರ್ಷಿಕ ಬ್ರಹ್ಮೋತ್ಸವಗಳು



**27-11-86 ರಿಂದ** **6-12-86 ವರೆಗೆ**

| | | | |
|---|---|---|---|
| 28–11–86 | ಶುಕ್ರವಾರ | ಧ್ವಜಾರೋಹಣ | (ಬೆಳಗ್ಗೆ) |
| 2–12–86 | ಮಂಗಳವಾರ | ಗಜವಾಹನ | (ರಾತ್ರಿ) |
| 3–12–86 | ಬುಧವಾರ | ಗರುಡವಾಹನ | (ರಾತ್ರಿ) |
| 5–12–86 | ಶುಕ್ರವಾರ | ರಥೋತ್ಸವ | (ಬೆಳಗ್ಗೆ) |
| 6–12–86 | ಶನಿವಾರ | ಚಕ್ರಸ್ನಾನ | (ಬೆಳಗ್ಗೆ) |

ವಿಶೇಷ ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಬೆಳಗ್ಗೆ ಸಂಜೆಗಳಲ್ಲಿ ವಿವಿಧ ವಾಹನೋತ್ಸವಗಳಿದ್ದು; ಪ್ರತಿದಿನವೂ ಸಂಗೀತ, ಹರಿಕಥೆ ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ತಿರುಚಾನೂರು ತಿರುಪತಿಗೆ ಸುಮಾರು ಹತ್ತು ನಿಮಿಷದ ಬಸ್‌ಪ್ರಯಾಣದ ದೂರದಲ್ಲಿದೆ. ತಿರುಪತಿಯಿಂದ ಒಂದರ ಹಿಂದೆ ಒಂದರಂತೆ ಹೆಚ್ಚಿನ ಬಸ್ ಸೌಲಭ್ಯವಿದೆ.

ನೀವೂ ಬನ್ನಿ ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಕೆ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೭] ಡಿಸೆಂಬರ್ ೧೯೮೬ [ಸಂಚಿಕೆ ೭


# ವಿಷಯಸೂಚಿ



ಮುಖಚಿತ್ರ : ಶ್ರೀರಂಗನಾಥನ ಹಿನ್ನೆಲೆಯಲ್ಲಿ ಆಂಡಾಳ್ ಚಿತ್ರ. ಶ್ರೀ ಕೆ. ಜಗದೀಶ

ಹಿಂಬದಿಯಲ್ಲಿ : ಶ್ರೀವಿಲ್ಲಿ ಪುತ್ತೂರು ದೇವಾಲಯ

ಒಳಗಡೆ : ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವದಲ್ಲಿ ಗಜವಾಹನ ಹಾಗೂ ಹಂಸವಾಹನ

ಗಳು ಶಿಲ್ಪಶಾಸ್ತ್ರಗಳಲ್ಲಿಯೂ ಪುರಾಣಗಳಲ್ಲಿಯೂ ವರ್ಣಿತವಾಗಿವೆ. ಈ ಎಲ್ಲ ಪ್ರಕಾರದ ಪ್ರತಿಮೆಗಳೂ ಶಿಲೆ ಮತ್ತು ಪಂಚಲೋಹಗಳಲ್ಲಿ ದೊರೆಯುತ್ತವೆ. ಇವುಗಳನ್ನು, ನೆನಪಿಟ್ಟು, ಕೊಳ್ಳುವ ಸೌಕರ್ಯಕ್ಕಾಗಿ ಬಾಹುಗಳ ಸಂಖ್ಯೆಯ ಆಧಾರದ ಮೇಲೆ ಹೀಗೆ ವಿಂಗಡಿಸಬಹುದು.

1. ಎರಡು ಬಾಹುಗಳಿರುವ ಗಣಪತಿ ಪ್ರತಿಮೆಗಳು ಪ್ರಾಚೀನವಾಗಿದ್ದು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತಿದ್ದರೂ ಇವುಗಳಲ್ಲಿ ಎರಡು ಪ್ರಕಾರಗಳು ಮಾತ್ರ ಇವೆ.

2. ನಾಲ್ಕು ಬಾಹುವಿನ ಗಣಪತಿಗಳಲ್ಲಿ ಎಂಟು ಪ್ರಕಾರಗಳಿವೆ.

3. ಆರು ಬಾಹುವಿನ ಗಣಪತಿಗಳಲ್ಲಿ ನಾಲ್ಕು ಪ್ರಕಾರಗಳಿವೆ.

4. ಎಂಟು ಬಾಹುಗಳ ಗಣಪತಿಯಲ್ಲಿ ಮೂರು ಪ್ರಕಾರಗಳಿವೆ.

5. ಹತ್ತು ಬಾಹುಗಳ ಗಣಪತಿಯಲ್ಲಿ ಎರಡು ಪ್ರಕಾರಗಳಿವೆ.

6 ಹದಿನಾರು ಬಾಹುಗಳ ಗಣಪತಿ ಒಂದೇ ಒಂದು ರೂಪದಲ್ಲಿದೆ.

ಸಾಮಾನ್ಯವಾಗಿ ಪದ್ಮಾಸನದಲ್ಲಿ ಕುಳಿತ ಗಣಪತಿಯ ರೂಪಗಳೇ ಹೆಚ್ಚು. ಆದರೆ ಇಲಿ, ಸಿಂಹ, ಆನೆಗಳನ್ನು ವಾಹನವಾಗಿ ಪಡೆದ ರೂಪಗಳೂ ಇವೆ. ಕೈಯಲ್ಲಿ ಪಾಶ, ಅಂಕುಶ, ಇರುವ ರೂಪಗಳು ಹೆಚ್ಚು. ಇವು ಗಣಪತಿಯ ಪ್ರಧಾನ ಆಯುಧಗಳು. ಇನ್ನುಳಿದ ಎರಡು ಕೈಗಳಲ್ಲಿ ಪರಶು (ಕೊಡಲಿ), ಮೋದಕದ ಪಾತ್ರೆ ಅಥವಾ ಮೋದಕ, ಮುರಿದ ಕೋರೆಯ ಹಲ್ಲು, ಬಾಣ, ಕಬ್ಬಿನ ತುಂಡು, ಬತ್ತದ ತೆನೆ, ಕಮಲ, ಪುಸ್ತಕ, ಅಕ್ಷಮಾಲೆ–ಹೀಗೆ ನಾನಾ ಪದಾರ್ಥಗಳಿರುವುವು. ಕೈಗಳು ಹೆಚ್ಚಾದಷ್ಟೂ ಪದಾರ್ಥಗಳು ಹೆಚ್ಚುತ್ತ ಹೋಗಿವೆ. ಅವುಗಳ ಆಯ್ಕೆಯಲ್ಲಿಯೂ ವ್ಯತ್ಯಾಸವಾಗುತ್ತ ಹೋಗಿವೆ. ಮೂಲತ: ಗಾಣಪತ್ಯ ಸಂಪ್ರದಾಯದ ದೇವತೆಯನ್ನು ಬೇರೆ
ಪಂಥದವರು ಅಳವಡಿಸಿಕೊಳ್ಳುತ್ತ ಹೋ
ತಮಗೆ ಇಷ್ಟವಾದ ವಸ್ತುಗಳನ್ನು ಕೈಯಲ್ಲಿ
ದಂತೆ ತೋರಿಸುತ್ತ ಹೋಗಿದ್ದಾರೆ. ಶಕ್ತಿ ಪ
ವರು ವೇತಾಳವನ್ನು ಕೈಯಲ್ಲಿ ಹಿಡಿ
ತೋರಿಸುವಷ್ಟು ಮುಂದೆ ಹೋಗಿದ್ದರೆ ವೈ
ಪಂಥದವರು ಶಂಖಚಕ್ರಗಳನ್ನು ತೋರಿಸು
ಮುಂದೆ ಸಾಗಿದ್ದಾರೆ. ಕಬ್ಬು, ನೇರಳಹ
ಪೇರಲಹಣ್ಣು, ಬತ್ತದತೆನೆ, ಗರಿಕೆ, ಕಮಲ,
ಫಲ-ಪುಷ್ಪ ಮತ್ತು ಸಸ್ಯಗಳ ಲಕ್ಷಣವ
ಪಾಶ, ಅಂಕುಶ, ಧನುಸ್ಸು, ತ್ರಿಶೂಲ
ಆಯುಧಗಳನ್ನೂ, ಮೋದಕ, ಸಕ್ಕರೆ ಇತ
ಸಿಹಿ ಪದಾರ್ಥಗಳನ್ನೂ ಕೈಗಳಲ್ಲಿ ಹಿ
ಗಣಪತಿಯು ನಿಸರ್ಗಪ್ರಿಯತೆ, ದುಷ್ಟರ ದಮ
ಭೋಜನ ಪ್ರಿಯತೆಗಳನ್ನು ವ್ಯಕ್ತಪಡಿಸುತ್ತಾ
ಪುಸ್ತಕ, ಅಕ್ಷಮಾಲೆಗಳಿಂದ ಜ್ಞಾನ, ಧ್ಯಾನ
ಪ್ರತೀಕನೂ ಆಗಿದ್ದಾನೆ. ಒಂದು ಮು
ನಾಲ್ಕು ಕೈಗಳ ರೂಪಗಳೇ ಹೆಚ್ಚಾಗಿದ್ದ
ಐದು ಮುಖ, ಮೂರು ಕಣ್ಣುಗಳ ರೂಪಗ
ಇವೆ. ಒಂದು ಕಡೆಯಿಂದ ನೋಡಿದರೆ ಹನುಮ
ಇನ್ನೊಂದು ಕಡೆಯಿಂದ ನೋಡಿದರೆ ಗರ
ಮಧ್ಯದಿಂದ ನೋಡಿದರೆ ಗಣಪತಿಯಂತೆ ಕಾಣ
ಅಪೂರ್ವ ಮಣ್ಣಿನ ಗಣಪತಿಯೂ ಕೋ
ದಲ್ಲಿದೆ.

## ಎರಡು ಬಾಹುಗಳ ಗಣಪತಿ

ಎರಡು ಬಾಹುಗಳ ಗಣಪತಿಗಳಲ್ಲಿ ನಿ
ಮತ್ತು ಕುಳಿತ ಹೀಗೆ ಎರಡು ತರಹದ ಗಣಪ
ರೂಪಗಳಿವೆ. ಎರಡೂ ಕೈಗಳಲ್ಲಿರುವ ವ
ಗಳಿಗೆ ಇನ್ನೂ ನಿಶ್ಚಿತ ರೂಪ ಬಂದಿಲ್ಲ. ನಾ
ಅಥವಾ ಅದಕ್ಕಿಂತ ಹೆಚ್ಚು ಬಾಹುಗಳಿರುವ
ಗಣಪತಿಯ ರೂಪಗಳನ್ನು ವರ್ಗೀಕರಿಸು
ಇವುಗಳನ್ನು ಕೈಗಳಲ್ಲಿಯ ವಸ್ತುಗಳ ಆಧ
ಮೇಲಾಗಲೀ, ಬಣ್ಣ ಅಥವಾ ಮುಖ ಮುದ್ರೆ
ಆಧಾರದ ಮೇಲಾಗಲೀ ವರ್ಗೀಕರಿಸಲು ಬರ
ದಿಲ್ಲ. ಗೋಕರ್ಣದ 'ವಟ' ರೂಪದ ದ್ವಿಬಾ
ಗಣಪತಿಯ ಬಲಗೈಯಲ್ಲಿ ಮೊಗ್ಗುಳ್ಳ ಕಮ
ದಂಟು, ಎಡಗೈಯಲ್ಲಿ ಹಿಡಿಕೆಯುಳ್ಳ ಮೋದ
ಪಾತ್ರೆಯಿದೆ. ಇಡಗುಂಜಿಯ ಗಣಪತಿಯ
ಗೈಯಲ್ಲಿ ಕಮಲವಿದ್ದು ಬಲಗೈಯಲ್ಲಿ ಮೋದ
ಪಾತ್ರೆ ಇದೆ. ಇಬ್ಬರ ಹೊಟ್ಟೆಯ ಮೇ
ಹಾವಿಲ್ಲ. ಗೋಕರ್ಣದವನು ಏಕದಂತ,
ಗುಂಜಿಯವನು ದ್ವಿದಂತ. ಇಬ್ಬರಿಗೂ ಹ
ದಲ್ಲಿ ಇಲಿ ಇಲ್ಲ. ಎರಡು ಬಾಹುಗಳಿರುವ ಕು
ಭಂಗಿಯಲ್ಲಿರುವ ಗಣಪತಿಗಳ ಕೈಯಲ್ಲಿ
ಒಂದು ಕೈಯಲ್ಲಿ ದಂತ, ಇನ್ನೊಂದು ಕೈ
ಮೋದಕ ಇರುವುದು ಕಂಡು ಬರುತ್ತದೆ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
# ತಿರುಚಾನೂರು

## ಅರ್ಜಿತ ಸೇವಾ ವಿವರ

| | | | | |
|---|---|---|---|---|
| 1. | ದರ್ಶನ: | ವಿಶೇಷ ಪ್ರವೇಶ: ಪ್ರತಿಯೊಬ್ಬರಿಗೆ | ರೂ | 2–00 |
| 2. | ಆರ್ಜಿತ: | ಕಾಲಸೋಲ 1) ಪೊಂಗಲ್ | ರೂ | 55–00 |
| | | 2) ಪುಳಿಯೋಗರೆ | ರೂ | 50–00 |
| | | 3) ದಧ್ಯೋದನ | ರೂ | 40–00 |
| | | 4) ಕೇಸರಿಬಾತ್ | ರೂ | 85–00 |
| | | 5) ಸಕ್ಕರೆ ಪೊಂಗಲ್ | ರೂ | 65–00 |
| | | 6) ದೋಸೆ | ರೂ | 35–00 |
| | | 7) ಶಾಕರಬಾತ್ | ರೂ | 90–00 |
| | | 8) ಸೀರಾ | ರೂ | 155–00 |
| 3. | ಸೇವೆಗಳು: | 1) ನಿತ್ಯ ಅರ್ಚನೆ ಒಂದು ವರ್ಷಕ್ಕೆ | ರೂ | 150–00 |
| | | 2) ಸಹಸ್ರನಾಮಾರ್ಚನೆ | ರೂ | 6–50 |
| | | 3) ಅರ್ಚನೆ | ರೂ | 1–00 |
| | | 4) ಆರತಿ | ರೂ | 0–50 |
| | | 5) ಪೂರಾಭಿಷೇಕ (ಶುಕ್ರವಾರಗಳಲ್ಲಿ) | ರೂ | 100–00 |
| | | 6) ಊಂಜಲ್ ಸೇವೆ ( ,, ಸಂಜೆ) | ರೂ | 150–00 |
| | | 7) ತಿರುಚ್ಚಿ ಉತ್ಸವ | ರೂ | 63–00 |
| | | 8) ಗಜವಾಹನ | ರೂ | 32–00 |

—ಪೇಷ್ಕಾರ್

## ನಾಲ್ಕು ಬಾಹುಗಳ ಗಣಪತಿ

ಗಣಪತಿಯ ಶಿಲಾ ಮತ್ತು ಪಂಚಲೋಹ ಪ್ರತಿಮೆಗಳಲ್ಲಿ ನಾಲ್ಕು ಕೈಗಳಿರುವ ಗಣಪತಿಯ ರೂಪಗಳೇ ಹೆಚ್ಚು. ಬಾಲಗಣಪತಿ, ಭಕ್ತಿಗಣಪತಿ, ಪ್ರಸನ್ನಗಣಪತಿ, ವಿಘ್ನರಾಜಗಣಪತಿ, ಬಾಲಚಂದ್ರ ಗಣಪತಿ, ಹರಿದ್ರಾಗಣಪತಿ, ಲಕ್ಷ್ಮೀಗಣಪತಿ, ಉಚ್ಛಿಷ್ಟಗಣಪತಿ – ಈ ಎಂಟುರೂಪಗಳೂ ನಾಲ್ಕು ಕೈಗಳಿರುವ ರೂಪಗಳು. ಬಾಲಗಣಪತಿ ಕೈಯಲ್ಲಿ ಮಾವು, ಬಾಳೆ, ನೇರಲೆಹಣ್ಣು ಮತ್ತು ಕಬ್ಬಿನ ತುಂಡುಗಳನ್ನು ಹಿಡಿದಿರುವನು. ಸೊಂಡಿಲಲ್ಲಿ ಪೇರಲಹಣ್ಣಿರುವುದು. ಉದಯಿಸುವ ಸೂರ್ಯನ ಬಣ್ಣ ಇರುವುದು. ಎಳೆ ಮಕ್ಕಳ ಮುಖ ಮುದ್ರೆಯಿರುವುದು. ಭಕ್ತಿಗಣಪತಿಯ ಕೈಯಲ್ಲಿ ತೆಂಗು, ಮಾವು, ಸಕ್ಕರೆ, ಪಾಯಸಗಳಿರುವವು. ಇವನ ಮೈಬಣ್ಣ ಬೆಳ್ಳಗಿರುವದು. ಪ್ರಸನ್ನ ಗಣಪತಿಯ ಎರಡು ಕೈಯಲ್ಲಿ ಪಾಶ, ಅಂಕುಶ ಗಳಿರುವವು. ಇನ್ನೆರಡು ಕೈಗಳು ವರದ ಹಸ್ತ, ಅಭಯಹಸ್ತ, ಕೆಲವು ಪ್ರತಿಮೆಗಳಲ್ಲಿ ವರದ, ಅಭಯದ ಬದಲಾಗಿ ದಂತ, ಮೋದಕಗಳಿರುವವು. ಇವರು ನಿಂತ ರೀತಿಯು ತ್ರಿಭಂಗ, ಸಮಭಂಗ ಅಥವಾ ಅಭಂಗ ವಾಗಿರಬಹುದು. ಇವನ ಬಣ್ಣವೂ ಉದಯಿಸುವ ಸೂರ್ಯನ ಬಣ್ಣ, ವಿಘ್ನರಾಜ ಗಣಪತಿ ಪಾಶ, ಅಂಕುಶಗಳನ್ನು ಹಿಡಿದಿರುವನು. ಮಾವಿನ ಹಣ್ಣನ್ನುತಿನ್ನುತ್ತಿರುವನು. ಇಲಿಯ ಮೇಲೆ ಕುಳಿತಿರುವನು. ಇವನ ಬಣ್ಣ ದಟ್ಟ ಕೆಂಪು ಬಣ್ಣ. ಹರಿದ್ರಾಗಣಪತಿ ಅಥವಾ ರಾತ್ರಿಗಣಪತಿಯು ಪಾಶ, ಅಂಕುಶ, ಮೋದಕ ಮತ್ತು ದಂತಗಳನ್ನು ಹಿಡಿದಿರುವನು. ಇವನ ಬಣ್ಣ ಅರಿಶಿಣದ ಬಣ್ಣ, ಇವನಿಗೆ ಮೂರು ಕಣ್ಣುಗಳಿರುವವು. ಬಾಲಚಂದ್ರ ಗಣಪತಿಯ ಹಣೆಯ ಮೇಲೆ ಚಂದ್ರನ ತಿಲಕವಿರುವುದು. ಕೈಯಲ್ಲಿ ಪಾಶ, ಅಂಕುಶಗಳ ಜೊತೆಗೆ ಮೋದಕ, ದಂತ ಇತ್ಯಾದಿ ವಸ್ತುಗಳಿರುವವು. ಧ್ವಜ ಗಣಪತಿಯ ಕೈಯಲ್ಲಿ ಪುಸ್ತಕ, ಅಕ್ಷಮಾಲೆ, ದಂಡ ಕಮಂಡಲಗಳಿರುವವು. ಲಕ್ಷ್ಮೀ ಗಣಪತಿಯು ಮಂತ್ರ ಮಹಾರ್ಣವದ ಪ್ರಕಾರ ನಾಲ್ಕೇ ಕೈಗಳುಳ್ಳವನಾಗಿರುವನು. ಎರಡು ಕೈಗಳಲ್ಲಿ ದಂತ ಮತ್ತು ಚಕ್ರ ಮೂರನೆಯದು ಅಭಯಹಸ್ತ, ನಾಲ್ಕನೆಯದರಿಂದ ಲಕ್ಷ್ಮಿಯನ್ನು ಹಿಡಿದಿರುವನು. ಲಕ್ಷ್ಮಿಯು ಒಂದು ಕೈಯಿಂದ ಇವನನ್ನು ಹಿಡಿದು ಇನ್ನೊಂದರಲ್ಲಿ ಕಮಲವನ್ನು ಹಿಡಿದಿರುವಳು. ಇವರಿಬ್ಬರ ಬಣ್ಣ ಬಂಗಾರದ ಬಣ್ಣ, ಉಚ್ಛಿಷ್ಟ ಗಣಪತಿಯು ವಾಮಾಚಾರಕ್ಕೆ ಸೇರಿದವನು. ಇವನ ಬಣ್ಣ ಕಪ್ಪು. ಇವನಿಗೆ ಮೂರು ಕಣ್ಣುಗಳು ಮೂರು ಕೈಗಳಲ್ಲಿ ಪಾಶ ಅಂಕುಶ, ಕಬ್ಬುಗಳನ್ನು ಹಿಡಿದಿರುವನು. ನಾಲ್ಕನೆಯದನ್ನು ತೊಡೆಯ ಮೇಲೆ ನಗ್ನಳಾಗಿ ಕುಳಿತಿರುವ ದೇವಿಯ ಯೋನಿಯ ಕಡೆಗೆ ಚಾಚುತ್ತಿರುವನು. ಕೆಲವು ಪ್ರತಿಮೆಗಳಲ್ಲಿ ಸೊಂಡಿಲನ್ನು ಚಾಚುತ್ತಿರುವಂತೆ ತೋರಿಸುವರು. ನಗ್ನಳಾದ ದೇವಿಯು ಒಂದು ಕೈಯಿಂದ ಗಣಪತಿಯನ್ನು ಆಲಿಂಗಿಸಿ ಇನ್ನೊಂದು ಕೈಯನ್ನು ಅವನ ಕಡೆಗೆ ಚಾಚುತ್ತಿರುವಳು. ಉಚ್ಛಿಷ್ಟಗಣಪತಿಗೆ ಆರು ಕೈಗಳು ಇರುವ ಪ್ರತಿಮೆಗಳೂ ಇರುವುದರಿಂದ ಇವನು ಆ ಗುಂಪಿಗೂ ಸೇರುವನು.

## ಆರು ಬಾಹುಗಳ ಗಣಪತಿ

ತರುಣಗಣಪತಿ, ಊರ್ಧ್ವಗಣಪತಿ ಮತ್ತು ಪಿಂಗಲ ಗಣಪತಿಗಳು ಈ ಗುಂಪಿಗೆ ಸೇರುವರು. ತರುಣ ಗಣಪತಿಯ ಕೈಯಲ್ಲಿ ಪಾಶ, ಅಂಕುಶ, ಪೇರಲಹಣ್ಣು ನೇರಲಹಣ್ಣು, ಸಾಸಿವೆ ಮತ್ತು ಬೆತ್ತದ ಕೋಲುಗಳಿರುವವು. ಇವನ ಬಣ್ಣ ಕೆಂಪು ಊರ್ಧ್ವಗಣಪತಿಯ ಐದು ಕೈಯಲ್ಲಿ ಕಲ್ಹಾರದ ಹೂವು, ಬತ್ತದ ತೆನೆ, ಕಬ್ಬು, ಬಾಣದಹೂವು, ದಂತ ಇರುವವು. ಆರನೆಯ ಕೈಯಿಂದ ಶಕ್ತಿಯನ್ನು ಆಲಿಂಗಿಸುತ್ತಿರುವನು. ಇವನ ಬಣ್ಣ ಬಂಗಾರದ ಬಣ್ಣ. ಪಿಂಗಲಗಣಪತಿಯ ಐದು ಕೈಯಲ್ಲಿ ಮಾವು, ಕಲ್ಹಾರದ ಹೂವು, ಕಬ್ಬು, ಸಾಸಿವೆ, ಮೋದಕ, ಪರಶುಗಳಿರುವವು. ಆರನೆಯ ಕೈಯಿಂದ ಲಕ್ಷ್ಮಿಯನ್ನು ಆಲಿಂಗಿಸಿರುವನು. ಆರು ಕೈಗಳ ಉಚ್ಛಿಷ್ಟಗಣಪತಿಯು ಕಮಲ, ಸೀತಾಫಲ, ವೀಣೆ, ಬತ್ತದ ತೆನೆ, ಅಕ್ಷಮಾಲೆಗಳನ್ನು ಹಿಡಿದಿರುವನು. ಉಳಿದ ಒಂದು ಕೈಯಿಂದ ನಗ್ನ ದೇವಿಯನ್ನು ಹಿಡಿದಿರುವನು. ಸೊಂಡಿಲನ್ನು ಅವಳ ಯೋನಿಯ ಕಡೆಗೆ ಚಾಚುತ್ತಿರುವನು.

ನೃತ್ತ ಗಣಪತಿ ಭುವನರಾಜ ಗಣಪತಿ ಮತ್ತು ಲಕ್ಷ್ಮೀ ಗಣಪತಿ–ಇವು ಎಂಟು ಕೈಗಳಿರುವ ಗಣಪತಿಯ ರೂಪಗಳು. ನೃತ್ತ ಗಣಪತಿಯ ಏಳು ಕೈಗಳಲ್ಲಿ ಪಾಶ, ಅಂಕುಶ, ಅಪೂಪ, ಕುಠಾರ, ದಂತ, ವಲಯ, ಅಂಗುಲೀಯಕಗಳಿರುವವು. ಒಂದು ಕೈಯಲ್ಲಿ ಏನೂ ಇರುವುದಿಲ್ಲ. ನೃತ್ಯಕ್ಕೆ ಅನುಗುಣವಾಗಿ ಬೀಸಲು ಈ ಕೈಯು ಹಾಗೆಯೇ ಇರುವುದು. ಈ ಗಣಪತಿಯ ಬಣ್ಣ ಬಂಗಾರದ ಬಣ್ಣ. ಲಕ್ಷಣಶಾಸ್ತ್ರದಲ್ಲಿ ಇದಕ್ಕೆ ಎಂಟು ಕೈಗಳನ್ನು ಹೇಳಿದ್ದರೂ ಪ್ರತ್ಯಕ್ಷ ಶಿಲ್ಪದಲ್ಲಿ ನಾಲ್ಕೇ ಕೈಗಳ ನೃತ್ತ ಪ್ರತಿಮೆಗಳಿರುವವು. ಭುವನ ರಾಜ ಗಣಪತಿಯ ಕೈಯಲ್ಲಿ ಶಂಖ, ಕಬ್ಬಿನ ಧನುಸ್, ಹೂವಿನಬಾಣ, ಮುರಿದ ದಂತ, ಪಾಶ, ಅಂಕುಶ ಬತ್ತದ ತೆನೆ ಇರುವವು. ಇವನ ಬಣ್ಣ ಬಿಳಿಯದು. ಕಬ್ಬಿನ ಧನುಸ್ಸು ಮತ್ತು ಹೂವಿನ ಬಾಣಗಳು ಕಾಮನ ಆಯುಧಗಳೆಂಬುದನ್ನು ಇಲ್ಲಿ ಸ್ಮರಿಸಬಹುದು. ನಾಲ್ಕು ಕೈಗಳ ಲಕ್ಷ್ಮೀ ಗಣಪತಿಯನ್ನು ಈಗಾಗಲೇ ಉಲ್ಲೇಖಿಸಿದ್ದೇವೆ. ಎಂಟು ಕೈಗಳ ಲಕ್ಷ್ಮೀ ಗಣಪತಿಯ ರೂಪವೂ ಇದೆ. ಇವನ ಕೈಯಲ್ಲಿ ಗಿಳಿ, ಬಂಗಾರದ ಕಮಂಡಲ, ಸೀತಾಫಲಗಳು ಇರುವದು ವೈಶಿಷ್ಟ್ಯ. ಸೊಂಡಿಲಿನಿಂದ ನೀರು ಸುರಿಯುತ್ತಿರಬೇಕು. ಇವನ ಬಣ್ಣ ಬಿಳಿಯದು

## ಹತ್ತು-ಹದಿನಾರು ಬಾಹುಗಳು

ಮಹಾಗಣಪತಿ ಮತ್ತು ಹೇರಂಬ ಗಣಪತಿ –ಇವು ಹತ್ತು ಕೈಗಳಿರುವ ರೂಪಗಳು. ವೀರವಿಘ್ನೇಶ್ವರನದು ಹದಿನಾರು ಕೈಗಳಿರುವ ರೂಪ. ಮಹಾಗಣಪತಿ ಕೆಂಪು ಬಣ್ಣದವ. ತೊಡೆಯ ಮೇಲೆ ಶಕ್ತಿ ಕುಳಿತಿರುವಳು. ಅವಳ ಬಣ್ಣ ಬಿಳಿಯದು. ಕೈಗಳಲ್ಲಿ ಕಮಲ, ಸೀತಾಫಲ, ಕಮಂಡಲ, ಗದೆ, ಮುರಿದ ದಂತ, ಕಬ್ಬು, ಬತ್ತದ ತೆನೆ, ಪಾಶಗಳಿರುವವು. ಹೇರಂಬ ಗಣಪತಿಗೆ ಐದು ಆನೆಯ ಮುಖಗಳಿರುವವು, ನಾಲ್ಕು ಮುಖಗಳು ನಾಲ್ಕು ದಿಕ್ಕುಗಳ ಕಡೆಗೂ ಐದನೆಯದು ಊರ್ಧ್ವ ಮುಖವಾಗಿಯೂ ಇರುವುದು. ಇವನು ಸಿಂಹದ ಮೇಲೆ ಕುಳಿ



ತಿರುವನು. ಇವನ ಬಣ್ಣ ಬಂಗಾರದ ಬಣ್ಣ. ಕೈಗಳಲ್ಲಿ ಪಾಶ, ದಂತ, ಅಕ್ಷಮಾಲೆ, ಪರಶು, ಮುದ್ಗರಗಳಿರುವವು. ವರದ ಮತ್ತು ಅಭಯಹಸ್ತಗಳೂ ಇರುವವು. ವೀರವಿಘ್ನೇಶ್ವರನಿಗೆ ಹದಿನಾರು ಕೈಗಳಿರುವವು. ನೇತ್ರಾಳ, ಶಕ್ತಿ ಆಯುಧ, ಧನುಸ್ಸು ಮತ್ತು ಬಾಣ, ಮುದ್ಗರ, ಗದೆ, ಅಂಕುಶ, ಪಾಶ, ಶೂಲ, ಕುಂದ, ಪರಶು ಮತ್ತು ಧ್ವಜಗಳು ಕೈಯಲ್ಲಿರುವವು. ಇವನ ಬಣ್ಣ ಕೆಂಪು.

ಮೇಲೆ ವಿವರಿಸಿದ ರೂಪಗಳು ಆಯುಧ, ಬಣ್ಣ ಮತ್ತು ಆರಾಧಕರ ಪಂಥ ಹಾಗೂ ಉದ್ದೇಶವನ್ನವಲಂಬಿಸಿ ವರ್ಗೀಕರಿಸಲ್ಪಟ್ಟವೆ. ಇವಲ್ಲದೆ ಸೊಂಡಿಲು ಬಲಕ್ಕೆ ಇದ್ದ ಬಲಮುರಿ ರೂಪಗಳು ತೊಡೆಯ ಮೇಲೆ ದೇವಿಯಿದ್ದ ಆದರೆ ವಾಮಾಚಾರದ ಪ್ರಕಾರವಲ್ಲದ ವಲ್ಲಭರೂಪ, ಷಣ್ಮಾತೃಗಳ ಜೊತೆಗಿದ್ದ ರೂಪ, ಶಂಖ ಚಕ್ರ ಧರಿಸಿದ ರೂಪ, ಗಜವಾಹನನಾಗಿರುವ ರೂಪಗಳ ಶಿಲೆ ಮತ್ತು ಪಂಚಲೋಹದ ಪ್ರತಿಮೆಗಳು ದೊರೆಯುತ್ತವೆ. ಮೊರದಂತೆ ಅಗಲಾದ ಕಿವಿಗಳು, ಡೊಳ್ಳು ಹೊಟ್ಟೆ, ಗಿಡ್ಡವಾದ ಕೈಕಾಲುಗಳು– ಇವು ಗಣೇಶನ ಸಾಮಾನ್ಯ ಲಕ್ಷಗಳಾದರೂ ವಿಶಾಲವಾದ ಕಿವಿಗಳನ್ನೇ ಪ್ರಧಾನವಾಗಿ ತೋರಿಸಿದ ಶೂರ್ಪ ಕರ್ಣಮೂರ್ತಿಗಳೂ, ವಿಶಾಲವಾದ ಹೊಟ್ಟೆಯನ್ನೇ ಪ್ರಧಾನವಾಗಿ ತೋರಿಸಿದ ಲಂಬೋದರ ಮೂರ್ತಿಗಳೂ ದೊರೆಯುತ್ತವೆ.

## ಅಧ್ಯಾತ್ಮಿಕ ವಿಸ್ತಾರ

ಗಣೇಶ ರೂಪಗಳ ವಿಶ್ಲೇಷಣೆಯಂತೆ, ಅವನ ಹುಟ್ಟಿನ ಕಥೆಗಳ ವಿಶ್ಲೇಷಣೆಯೂ ಆಕರ್ಷಕವಾಗಿದೆ. ಅದನ್ನು ಇಲ್ಲಿ ಪ್ರಸ್ತಾಪಿಸಿಲ್ಲ. ಅವನ ರೂಪವನ್ನು ಓಂಕಾರಕ್ಕೆ ಹೋಲಿಸಿ ಅದರ ಅಧ್ಯಾತ್ಮಿಕತೆಯನ್ನು ವಿವರಿಸುವುದೂ, ಅವನು ಶಬ್ದಬ್ರಹ್ಮ ಅಕ್ಷರಗಣಗಳ ನಾಯಕ ಎಂಬುದನ್ನು ವಿವರಿಸುವುದೂ, ಅವನು ಆಕಾಶತತ್ತ್ವದ ಪ್ರತಿನಿಧಿ ಅವನ ಡೊಳ್ಳು ಹೊಟ್ಟೆ ಆಕಾಶ, ಅದರಲ್ಲಿಯ ಜೀವರಾಶಿಗಳೇ ಮೋದಕಗಳು–ಎಂದು ವಿವರಿಸುವುದೂ, ಅವನು ವಿಶ್ವಂಭರ ನಾಮಕ ಪರಮಾತ್ಮನ ಪ್ರತಿಬಿಂಬ, ವಿಶ್ವಂಭರನ ರೂಪ ಗಜರೂಪ, ಆದುದರಿಂದ ಇವನ ರೂಪವೂ ಗಜರೂಪ ಎಂದು ವಿವರಿಸುವುದೂ ಕಂಡು ಬರುತ್ತದೆ. ಹೀಗೆ ಪಂಡಿತರ ಕೈಗೆ ಸಿಕ್ಕ ಗಣೇಶ ಅಧ್ಯಾತ್ಮಿಕ ವಿಸ್ತಾರವನ್ನೂ ಪಡೆದಿದ್ದಾನೆ. ವಿಘ್ನಗಳನ್ನುಂಟುಮಾಡುವ ವಿನಾಯಕರೆಂಬ ದುಷ್ಟಶಕ್ತಿಗಳ ನಿಯಂತ್ರಕನೂ ಅವನಾಗಿದ್ದಾನೆ. ಈ ಶಕ್ತಿಗಳು ಮೈಮೇಲೆ ಬರುವುದು. ಜಗನ್ನಾಥದಾಸರು ಹರಿಕಥಾಮೃತಸಾರದಲ್ಲಿ ಗಣೇಶಸ್ತೋತ್ರದ ಒಂದು ಸಂಧಿಯನ್ನೇ ಸೇರಿಸಿ ಅವನ ಅಧ್ಯಾತ್ಮಿಕತೆಯನ್ನು ವಿ ಸಿದ್ದಾರೆ. ಅವರ ಗುರುಗಳಾದ ಗೋಪಾ ದಾಸರು ಗಣೇಶಾಂಶರೆಂಬ ಪ್ರತೀತಿ ಇದೆ.

## ಕರ್ನಾಟಕದಲ್ಲಿ

ಗೋಕರ್ಣ, ಇಡಗುಂಜಿಗಳಲ್ಲದೆ ಹಳೇಬೀ ನಲ್ಲಿಯ ನೃತ್ಯಗಣಪತಿ, ನಂಜನಗೂಡಿನಲ್ಲಿಂ ಉಚ್ಛಿಷ್ಟ ಗಣಪತಿ, ಕೋಲಾರದಲ್ಲಿಯ ವ್ಯಾಘ್ರ ಗಣಪತಿ, ಹಂಪಿಯಲ್ಲಿಯ ಕಡಲೆಕಾಯಿ ಗಣ ಕರ್ನಾಟಕದಲ್ಲಿಯ ಆಕರ್ಷಕ ಗಣಪತಿ ರೂಪಗಳ ಗಿವೆ. ಸಹ್ಯಾದ್ರಿಯ ಕರಾವಳಿ ಜಿಲ್ಲೆಗಳಲ್ಲಿಯ ತಮಿಳು ನಾಡಿನಲ್ಲಿಯೂ ಗಣಪತಿಯ ಪ್ರಾಚೀ ದೇವಾಲಯಗಳೂ ಪ್ರತಿಮೆಗಳೂ ಇವೆ.

ಗಣಪತಿ ಬಹುಶಃ ಮೊದಲು ಆನೆಯ ರೂಪ ಜಾನಪದ ದೇವತೆಯಾಗಿದ್ದು ಬಳಿಕ ಗಾಣಪ ಪಂಥವು ಬೆಳೆದಿರಬೇಕು. ಕ್ರಮೇಣ ಶಿವನ ಪ ವಾರದ ದೇವತೆಯಾದ. ಈಗ ಸಮಗ್ರ ಹಿಂದ ಸಮಾಜ ದೇವತೆಯಾಗಿದ್ದಾನೆ. ಕ್ರಿ. ಪೂ. 1– ಶತಮಾನಗಳಿಂದ ಆರಂಭವಾದ ಈ ಸಮನ ಯವು ಕ್ರಿ. ಶ. 4–5ಕ್ಕೆ ಪೂರ್ಣಗೊಂಡಿರಬೇಕ ಸಹ್ಯಾದ್ರಿಯ ಕರಾವಳಿಯಲ್ಲಿ ಬೆಳೆದ ಈ ಪಂ ಈ ದೇವತೆ ಕ್ರಮೇಣ ರಾಷ್ಟ್ರದ ತುಂಬೆಲ್ಲ ಹರ ದಂತಿದೆ. 1

ರಾಗ_ಭೂಷಣಾವಳಿ ಆದಿತಾಳ

ಕೊಂಡಾಡುವಂತೆ ಮಾಡು ಮುಕುಂದಾ
ಮರೆಯದೇ ನಿನ್ನ ಚರಣಾರವಿಂದ || ಪ ||

ಶ್ರೀವಲ್ಲಭನೇ ವರದನೇ
ದಯಾಪರನೇ ಭಕ್ತಪ್ರಿಯನೇ
ಭವದಾಟಿಪ ಕೋವಿದನೆ ನಾಥನೆ
ನಾಗಶಯನ ಜಗನ್ನಿವಾಸಾ ಎಂದು || ೧ ||

ಜಯವಾಗಲಿ ದೇವಕಿನಂದನ
ಜಯವಾಗಲಿ ಯದುವಂಶಪ್ರದೀಪ
ಜಯಮೇಘಶ್ಯಾಮ ಕೋಮಲಾಂಗ
ಜಯ ಭೂಭಾರನಾಶ ಎಂದು || ೨ ||

ರಾಗ–ತೋಡಿ ಝಂಪೆತಾಳ

ಚಿಂತಿಸುವೆ ಶ್ರೀಹರಿಯ ಸದಾ ನಗುಮುಖದ
ನಂದಗೋಪ ತನಯ ನಾರದ ಮುನಿವಂದ್ಯನ || ಪ ||

ಸುಖದುಃಖ ತೊರೆಯೆ ನಾ ನಿನ್ನ ನಮಿಸಲಿಲ್ಲಾ
ಘೋರ ನರಕವು ತಪ್ಪಲೆಂಬ ಕಾರಣವಲ್ಲಾ
ರಮಣೀಯ ಕೋಮಲೆಯರೊಡನೆ ರತಿಸುಖಕಲ್ಲಾ
ಎನ್ ಹೃದಯ ಭವನದನುಭಾವ ಭಾವದಿ ಭಜಿಸೆ || ೧ ||

ರಾಗ–ಅಮೃತವರ್ಷಿಣಿ ತಿಶ್ರನಡೆ ಏಕತಾಳ

ನಿನ್ನ ರೂಪು ಎಲ್ಲ ಮಹಾ ಸೃಷ್ಟಿಯನ್ನು ಮೀರಿದೆ
ನಿನ್ನ ಶಕ್ತಿ ಎಲ್ಲ ಮಹಾ ಮಹಿಮೆಯನ್ನು ತೋರಿದೆ || ಪ ||

ಪೃಥ್ವಿ ಎಲ್ಲ ಒಂದೆ ಒಂದು ಪರಮಾಣುವು ಎನುವಂತೆ
ಎಲ್ಲ ಜಲದ ರಾಶಿ ರಾಶಿ ಒಂದೆ ಒಂದು ಕಣವಂತೆ || ೧ ||

ಅಗ್ನಿ ಎಲ್ಲ ತುಚ್ಛವಾದ ಒಂದೆ ಸಣ್ಣ ಕಿಡಿಯಂತೆ
ಪ್ರಚಂಡ ವಾಯುವೆಲ್ಲವೂ ಮೆಲ್ಲ ಬಿಟ್ಟ ಉಸಿರಿನಂತೆ || ೨ ||

ಮಹಾಕಾಶವೆಲ್ಲ ಸೂಕ್ಷ್ಮವಾದ ರಂಧ್ರ ರಂಧ್ರದಂತೆ
ಎಲ್ಲ ಲೋಕ ಪ್ರಭೃತಿಗಳು ಅನಧಿಕಾರ ಬಂಟರಂತೆ || ೩ ||

ಎಲ್ಲ ಇತರ ದೇವತೆಗಳು ಕೀಟಕೀಟ ಕೀಟದಂತೆ
ಎಲ್ಲ ಎಲ್ಲೆ ಮೀರಿದಂತೆ ವಿಶ್ವವಿಜಯ ಗಳಿಸಿದಂತೆ || ೪ ||

ರಾಗ–ರೀತಿಗೌಳ ಖಂಡಚಾಪು ತಾಳ

ಶ್ರೀಕೃಷ್ಣ ಮಂತ್ರವೇ ಮಹಾಮಂತ್ರ
ನಾಲಿಗೆಯೆ ಜಪಿಸು ಸದಾ ಈ ಮಂತ್ರ || ಪ ||

ಶತ್ರುಗಳ ನಾಶನಕೆ ಇದೊಂದೇ ಮಂತ್ರ
ಸಕಲ ಉಪನಿಷತ್ತು ಸಾರುವ ಮಂತ್ರ

# ಮುಕುಂದಮಾಲಾ ಮಕರಂದ

ಧರ್ಮ ಧನ ಸಂಚಯದಿ ಎನಗಾಶೆಯಿಲ್ಲಾ
ವಿಷಯ ಸುಖ ಭೋಗದಿ ಎನಗಾಶೆಯಿಲ್ಲಾ
ಪೂರ್ವ ಕರ್ಮಾನುಸಾರ ಹೇಗೋ ಹಾಗೆ ನಡೆಯಲಿ
ಜನುಮ ಜನುಮ ನಿನಪಾದ ಭಕ್ತಿ ನಿಶ್ಚಲವಿರಲಿ || ೨ ||

ರಾಗ–ಮಾಂಡ್ ಝಂಪೆತಾಳ

ಎಲೆ ಜಿಹ್ವೆ! ಕೇಶವನ ಗುಣಗಾನಮಾಡು
ಎಲೆ ಮನವೆ! ಮುರಾರಿಯ ಭಜನೆ ಮಾಡು || ಪ ||

ಎಲೆ ಕರವೆ! ಶ್ರೀಧರನ ಅರ್ಚನೆ ಮಾಡು
ಎಲೆ ಕಿವಿಯೆ! ಅಚ್ಯುತನ ಕಥಾಶ್ರವಣ ಮಾಡು || ೧ ||

ಎಲೆ ಕಣ್ಣೆ! ಶ್ರೀಕೃಷ್ಣನ ದರುಶನ ಮಾಡು
ಎಲೆ ಕಾಲೆ! ಶ್ರೀಹರಿಯ ಗುಡಿಗೆ ದಯಮಾಡು || ೨ ||

ಎಲೆ ಮೂಗೆ! ಮುಕುಂದಪದತುಲಸಿ ಮೂಸಿನೋಡು
ಎಲೆ ಶಿರವೆ! ಅಧೋಕ್ಷಜಗೆ ನಮಸ್ಕಾರಮಾಡು || ೩ ||

ಮುಕುಂದಮಾಲೆಯ ಸ್ತೋತ್ರವನ್ನು ರಚಿಸಿದವರು ಶ್ರೀ ಕುಲಶೇಖರ ಆಳ್ವಾರ್‌ರವರು. ಕೇರಳದ ಮಹಾರಾಜರು ಮಹಾ ದೈವಭಕ್ತರು. ಶಂಕರ ಭಗವತ್ಪಾದರ ಭಜಗೋವಿಂದಂ ಸ್ತುತಿಯಷ್ಟೇ ಜನಪ್ರಿಯವಾದದ್ದು, ವಿಶಿಷ್ಟಾದ್ವೈತ ತತ್ತ್ವದ ತಿರುಳು ಉಳ್ಳದ್ದು, ಸಾರವತ್ತಾದ್ದು, ಸಂಗೀತ ಮಯವಾದ್ದು, ಕನ್ನಡದಲ್ಲಿ ಮೂಡಿಸಲು ಪ್ರಯತ್ನಿಸಲಾಗಿದೆ.

ಸಂಗೀತ ಬಲ್ಲ ರಸಿಕರು ಇದನ್ನು ಹಾಡಲು ಈ ಮೇಲಿನ ಕೃತಿ ರಚನೆ ಮಾಡಲಾಗಿದೆ. ಮುಕುಂದನ ಕೃತಿಗೆ ಪಾತ್ರ ರಾಗಲಿ.

ಗಮಕಿ **ಶ್ರೀ ಬಿ. ಎಸ್. ರಾಮಾಚಾರ್**

ಸಂಸಾರ ಸಂಕಟವ ಪಾರುಮಾಡುವ ಮಂತ್ರ
ಅಜ್ಞಾನಾಂಧಕಾರವ ದೂಡುವ ಮಂತ್ರ ॥ ೧ ॥

ಸರ್ವೈಶ್ವರ್ಯವ ಸಾಧಿಪ ಮಂತ್ರ
ವ್ಯಸನ ಸರ್ಪದ ವಿಷವೇರಂಥಾಮಂತ್ರ
ಮೂಲೋಕ ಜೀವರ ಉದ್ಧಾರದಾ ಮಂತ್ರ
ಎಲ್ಲ ಭಕುತರ ಜನ್ಮ ಸಾಫಲ್ಯ ಮಂತ್ರ ॥ ೨ ॥

ರಾಗ–ಕಾನಡಾ ಆದಿತಾಳ

ಸಾರ್ಥಕವಾಗಲಿ ನಮ್ಮ ಜೀವಿತವು
ನಿನ್ನ ಚರಣ ಧ್ಯಾನಾಮೃತ ಸವಿದು ॥ ಪ ॥

ಭಕ್ತಿಯಿಂದ ಮುಗಿದ ಕೈಗಳಿಂದಾ
ವಿನಯದಿ ಬಾಗಿದ ಶಿರದಿಂದಾ
ಹರುಷದಿ ಪುಳಕಾಂಕಿತ ತನುವಿಂದಾ
ಭಾವೋದ್ರೇಕ ಗದ್ಗದ ಕಂಠದಿಂದ
ಆನಂದ ಭಾಷ್ಪ ಹೊರಹೊಮ್ಮುತಿರುವ
ಕಣ್ಗಳಿಂದ ಸತತ ಸೇವೆ ಗೈದು ॥ ೧ ॥

ರಾಗ–ಹಿಂದೂಸ್ಥಾನಿ ತೋಡಿ ಪೀಲು ಆದಿತಾಳ

ಎನ್ನ ಜನುಮಫಲ ಬಂದಿದೆ । ಹೇ ಮಧುಕೈಟಭಾರಿ ಶೌರಿ ॥ ಪ ॥

ನಿನ್ನ ದಾಸಾನುದಾಸ ಭಕುತರ ಪಾದಸೇವೆ ಮಾಡಿಕೊಂಡಿರುವೆ
ನಿನ್ನ ಭೃತ್ಯರಿಗೆ ನಾನು ॥ ಅ.ಪ. ॥
ಭೃತ್ಯನೆಂದು ನೀನೆನ್ನ ಎಣಿಸು
ಹೇ ಲೋಕನಾಥ ನಾರಾಯಣಾ
ನಾನದನೆ ಬೇಡುವೆ ಅನುಗ್ರಹಿಸು ॥ ೧ ॥

ಸದಾ ನಿನ್ನ ಪಾದಕಮಲ ನಮಿಸುವೆ
ಸದಾ ನಿನ್ನ ಪೂಜೆಯ ಮಾಡುವೆ
ಸದಾ ನಿನ್ನ ನಿರ್ಮಲ ನಾಮ ಪಾಡುವೆ
ಸದಾ ನಿನ್ನ ನಿಜ ತತ್ತ್ವ ಸ್ಮರಿಸುವೆ ॥ ೨ ॥
ಕ್ಷೀರ ಸಾಗರದಲೆಯ ತುಂತುರು
ತಾರೆಯಂತೆ ಶೋಭಿಪಚಾರಮೂರ್ತಿ
ನಿತ್ಯಾನಂದ ಶ್ರೀ ಶೇಷಶಾಯಿ
ಮಾಧವಾ ನಮೋ ಮಧುಸೂದನಾ ॥ ೩ ॥

---



# ದತ್ತಾತ್ರೇಯಾವತಾರ

ಸಕಲಗಣಗಳಿಗೊಡೆಯು ಕರಿಮುಖ
ನೆ ಕರುಣಾಳು ಬೆನಕ ವಿನಾಯಕ
ಸಕಲ ವಿಘ್ನ ನಿವಾರಕನೆ ಮೂಷಕವನೇರಿದನೆ।
ಕಕ್ಕುಲಾತಿಯುತೊಡೆದು ವಿಘ್ನಗ
ಳ ಕಡಿದು ಸರಾಗದಲಿ ನಿರ್ವಿ
ಘ್ನ ಕರುಣಿಸು ಕಾವ್ಯವನೊರೆವ ನಿರ್ಧರಕೆ ವಿಘ್ನೇಶ॥ ೧

ಸರಸಿಜಭವನರಸಿ ಸರಸತಿ ಮ
ನೋರಥ ಕರುಣಿಸು ಪರಬೊಮ್ಮಂ
ಗರಗಿಣಿಯ ನೀಡಮಲವಾಣಿಯ ಕಾವ್ಯವನೊರೆಯಲು।
ಕರದಿ ಪಿಡಿದಾಬೀಣೆಯಾ ಝೇಂ
ಕಾರಕನ್ನ ಮಿಡಿಸುತ ನಾದದ
ನುರಣವ ಸ್ಫುರಿಸು ಚೆಲುವನೆಸೆದು
ಪಂಕ್ತಿಬಂಧದೊಳು॥ ೨

ಭಕ್ತಜನಮನಸಾರಸ ವಿಹಾ
ರಿ ಕರುಣಾಳು ತ್ರಿಜಗವಂದ್ಯನೆ
ಸಕಲ ಭಕ್ತರ ರಕ್ಷ ಗಾಣಗಪುರದೊಡೆಯ ಗುರುವೆ।
ಮುಕ್ಕಣ ಕಮಲ ನಾಭ ಕಮಲಜ
ರುಕ್ಕೈವದ ಮೂರುತಿ ಸಲಹುವುದು
ಅಕ್ಕರದಿ ನಿನ್ನೀ ಭಕುತರನನವರತವು ದತ್ತಾ॥ ೩

ಬರಡ ಹೆಯನಾಗಿಸಿ ಕಡುಮುದುಕಿ
ವರುಷವರವತ್ತರ ಸತಿಗೆ ಪು
ತ್ರರಕೊಡುತ ಕುಲಹೀನನಿಂ ವೇದವ ನುಡಿಸಿದಾತ।
ವರಮರಜಭೀಮಾ ತಟಾಕದಿ
ಕರಮೆಸೆದ ಗಾಣಗಪುರದರಸ
ಗುರುಚರಿತೆಯನು ಭಕ್ತಜನ ಲಾಲಿಸಲು ಪೇಳುವೆನು॥ ೪

ಜಲಮಯವು ಜಗವೆಲ್ಲವಾಗಿರೆ
ಜಲನರಯಣನೆ ಜಗವ ತುಂಬಿರೆ
ಜಲದೊಡನೆ ಜಗವನುದಿಪಮನದವ್ರೋ ನರಯಣನುತ್ತಿತಾನ್
ಕಾಲವುರುಳೆ ಹಿರಣ್ಯ ಗರ್ಭವ
ಸಲೆ ರಜೋಗುಣದಿಂದಲಿ ರಚಿಸಿ
ರಲದೊಡೆಯುತಲಿ ಭೂಮಿಯಾಗಸವೆಸೆದವಾಗಲ್॥ ೫

ಅಜನುದಿಸಲಜಾಂಡದೊಳ
ಗಾ ಜಗ ಹದಿನಾಲ್ಕುದಶದಿಕ್ಕುಗ
ಳ ಜನದಮನವನಾಳುವಮನಸ್ವಜನಗಳನಂದು।
ಸೃಜಿಸಿದ ಮರೀಚ ಕ್ರತುಪುಲಹ
ಸುಜನ ಮನರಥನ ತ್ರಿಮೂರ್ತಿಗ
ಳ ಜನಕನೆನಿಸಲತ್ರಿಮುನಿಯ ಸೃಷ್ಟಿಸಿದನಾಗ॥ ೬

ತನ್ನಯ ತಪದ ಬಲ್ಮೆಯಿಂದಲಿ
ನನ್ನಿನುಡಿಯಾ ಬಲದ ಬಲದಲಿ
ಸನ್ನೆಮಾತ್ರದಿ ಸಗ್ಗಗಳಿಸುವತಿಶಕುತಿವಂತನ।
ದಿನಪನೆನಿಪ ಪ್ರಖರತೇಜದ
ಲನುದಿನದ ಕಾಯಕವೆಸಗುತ
ಪನಿಯೊಳತ್ರಿಮುನೀಂದ್ರನೆಸೆದನದೇನ ಬಣ್ಣಿಸಲಿ॥ ೭

ಪತಿಪರಾಯಣೆಸತಿ ಶಿರೋಮಣಿ
ಸತಿ ಪರಮ ಸುಗುಣೆಯೆನಿಸಿ ಮುದದೊ
ಳತಿಥಿ ಸೇವೆಯುಗೈವಳತ್ರಿಮಹರ್ಷಿ ಸತಿಯುವಳು।
ನಿತ್ಯಸೇವೆಯಲೊಂದಿನಿತು ಲೋ
ಪ ತರದೆ ಜಗದೊಳು ಪರಮ ಪತಿ
ವ್ರತೆಯೆನಿಸಿದಳವನ ಸುಯೆಮೂಜಗವು ಪೊಗಳುತಿರುವೊಲು॥



ಶ್ರೀಮತಿ ಸತ್ಯವತಿ ಎಸ್. ನಾರಾಯಣ

ಸತಿಗೆ ತಾಪವ ತೋರಿದಡಪ
ಖ್ಯಾತಿ ತನಗೆಂದು ನೆನೆದು ದಿನಪ
ನತಿ ಮುದದಿ ತನ್ನಯ ಬಿಸುಗದಿರ ಮಿದುವೆನಿಸಿ ಮೆರೆದಾ ।
ಅತ್ರಿಸತಿಯ ಪವಿತ್ರತೆಗಳುಕಿ
ದಂತಿಹ ಧರಣಿಯು ನಿಯಮದೊಳೆಂ
ಬಂತೆ ಮಾರುತ ಮಾರಿದನು ತನ್ನಯ ಜವವನಲ್ಲಿ ॥ ೯

ವಾಯುವರುಣಗ್ನಿರವಿ ಬೆದರಿ ನ
ಡೆಯೆ ಶಚೀಪತಿ ನಡುಗುತ ಮುರಾ
ರಿಯ ನರಸುತುರವಣಿಸಿ ನಡೆತಂದ ಸುರರೊಡನಲ್ಲಿ ।
ನಾಯಕಸುರನ ಮೊಗದ ಭೀತಿಯ
ನಾಯಕನ ಮಾಳ್ಪವನು ಲಕ್ಷ್ಮೀ
ನಾಯಕನೆನೆ ಮೆರೆದೆಸೆನನು ಹೇ ತೆರೆದ ಹಸ್ತದೊಳು ॥ ೧೦

ಎಲೆ ಶಚೀಪತಿಯವಸರದ ಬರ
ವಲ ದುಗುಡವೇಕೈ ಮೊಗದಿ ತರ
ವಲ್ಲನಿನಗೀ ಬಿಗಿದ ಮೊಗ ಕಾರಣವನರುಹುವುದು ।
ಎಲ್ಲ ಕಂಟಕ ಕಳೆದು ಮಂಗಳ
ಸೊಲ್ಲತಹೆ ಸಂಶಯವ ಕಳೆನುಡಿ
ಯೆಲೆದಿವಿಜಪತಿ ಚಿಂತೆಯ ಬಿಡು ಬಿಡೆಂದನಸುರಾರಿ ॥ ೧೧

ದಿವಿಜಪತಿಯಿನ್ನೆಲ್ಲಿಯತ್ರಿಯೆ
ದಿವಿಜಪತಿಯಹತಿಪತಿವ್ರತೆ
ಯವಳತಿಭಕುತಿಯತಿಥಿಸಿಷ್ಠೆಯವನನೆ ಕಾದಿರಲು ।
ದಿವಿಜಪತಿಯುರಸಿಯೆನಿಪಳವಳು
ದಿವಿಜರೊಡೆಯನ ಗರ್ವ ಮುರಿದುದು
ಅವತೆರದೊಳು ರಕ್ಷಿಸುವುದೆಂದನು ಸಹಸ್ರಾಕ್ಷ ॥ ೧೨

ಸುರಪತಿಯ ನುಡಿಯಾಲಿಸುತಲಂ
ತುರದಿಕೆಂಪಡರಿತು ಬಿಸಜನಾ
ಭರಮೆಯಕ್ಷಿದ್ವಯ ತನುನಡುಗೆ ಕ್ರೋಧಹೊತ್ತಿರಲು ।
ಮಾರಮಣ ಹೋಯ್ತೆಂದು ಮಾನವು
ಮಾರಿ, ತಡವೇಕೆ ನಡೆ ಪರಿಕಿಸ
ಲುರದಿ ಪರಶಿವ ಬೊಮ್ಮರೊಡನೆಂದಳು ಲಕುಮಿದೇವಿ ॥ ೧೩

ಸತಿಯಳನು ತಾಪವನು ನೋಡಿ ನ
ಗುತ ಮನದಿ ಜಣದೊಳು ಮನವ ಕಲು
ಷಿತಗೊಳಿಪಸೂಯೆಗುದಿಸಿತಸೂಯೆಯುರೆಜಣ ಹರಿಯೊಳ್ ।
ಆತಿ ಕಠಿಣವೈ ನಿಗ್ರಹವು ದೈ
ವತ್ವವೇ ಮಾರಿ ಕೊಳೆ ಮತ್ಸರ
ಕೆತ್ತಣಗಣನೆ ಹುಲುನರರೆನುತ ಚಿಂತಿಸಿದನು ಹರಿ ॥ ೧೪

ತಿಳಿಯೆ ಸಂಗತಿಯಂ ತೊಡನೆ ಬಂ
ದಿಳಿದವರಕಾಮಹರದೇವಾ
ಬಳಿಕವನನನುಸರಿಸಿ ಕಂಡನು ಸರಸತಿಯರಸನು ।
ಆಳವಿಗೆ ನಿಲುಕದತಿಥಿ ಭಕುತಿಯ
ನಿಳೆಯೊಳು ಪಸರಿಸಲೆನುತಲವರು
ಇಳೆಯೊಳಗಿಳಿದರು ಸತಿಯ ಪರಿಕಿಸುವ ನೆವವ ಹೂಡಿ ॥ ೧೫

ದೇವ ದೇವರ ಛಲದ ಪರಿಯನು
ದೇವಿ ಲಕುಮಿಯಸೂಯೆ ಫಲವನು
ದೇವಿಯನಸೂಯೆಯತಿಭಕುತಿಗಲುವ ಪರಿಯನಂದು ।
ದೇವ ರವಿತಾ ನೋಡಲೀಯಲು
ದೇವಿ ನಿಶೆ ಸಡಗರದಿ ನಡೆದಳು
ದೇವರುಗಳಿಳೆಯೊಳಗಡಿಯಿಡುವ ಸನ್ನೆಯರಿತಾಗ ॥ ೧೬

ಬೆರಗ ಸೂಸುತ ನಿಶೆಯು ಮಾತಿಗೆ
ಸರಸಿಜಸಖನೆನಿಸಿದ ರವಿ ತಾ
ನರುಣನ ಕರೆಸುತ ನಿಜ ಸಂಗತಿ ತಿಳಿದುಬರುವುದೆನೆ ।
ಅರಸನಪ್ಪಣೆಯೆನುತಲರುಣನು
ತರಹರದಿಳೆಯೊಳಗೆ ಪಸರಿಸುತ
ತರಳೆ ನಿಶೆಯುರುಹಿದ ನಿಜವ ತಿಳಿದರುಹಿದನು ರವಿಗೆ ॥ ೧೭

ಅರುಣನರುಹಿದ ಸಂಗತಿಯುದ
ಚ್ಚರಿಯ ಮೂಡಿಸೆ ರವಿಯೊಳು
ತರಹರದಿಳೆಗಿಳಿದ ಮುನಿಗಳಾಟವನು ಈಕ್ಷಿಸಲು ।
ಪರಶಿವ ಕಮಲನಾಭ ಕಮಲಜ
ಸರಸದೊಳು ತೊಡಗಿಹ ವಿನೋದವ
ವರಸತಿಗೆ ಕರುಣೆವುದ ನೋಡಲಿಳಿದನಿಳೆಗೆ ಭವದೊಳ್ ॥ ೧೮

ಅತ್ತಲತ್ರಿಮುನಿ ನಿಜನಿವಸದಿ
ನಿತ್ಯಕರ್ಮಕ್ಕೆಂದು ನಡೆದಿರ
ಲಿತ್ತಲೀದೇವರುಗಳು ಮುನಿಗಳೆನಿಸಿ ಮೈದೋರೆ ।
ಸುತ್ತಲೆಲ್ಲ ಪಸರಿಸಿತು ಪ್ರಭೆ
ದತ್ತದೇವನುದಯವನಾಗಳೆ
ಪೊತ್ತುಬಂದಿಹ ಮೂರು ದೇವರ ಸತಿಗೆ ತೋರ್ಪವೊಲು ॥ ೧೯

ಸತಿಯ ಪತಿಭಕುತಿಯನಿಳೆಗೆತೋ
ರುತ ಜಗದಿ ದತ್ತನುದಯವ ನೋ
ಡುತಲವನ ಮೈಮೆಯ ನಿಳೆಯೊಳಗಿಡಿಸೆ ಬರುತಿಹರನು ।
ಅತ್ತರಿನ ಪರಿಮಳದಿದಿರ್ಗೊಳೆ
ವಾತಪರಿಪರಿಯಲರ ಸೌರಭ
ಹೊತ್ತು ತರಹರದೊಳು ಪಸರಿಸಿದನಾವನದೊಳಂದು ॥ ೨೧

(31ನೇ ಪುಟ ನೋಡಿ)

# ಮಹಾಯೋಗಿ ಅರವಿಂದರು

ಶ್ರೀ ಚಿ. ನಂ. ಕೃಷ್ಣಮೂರ್ತಿ

ಡಾ॥ ಪಟ್ಟಾಭಿಸೀತಾರಾಮಯ್ಯ ಅವರು ಅರವಿಂದರನ್ನು ಕುರಿತು ಹೀಗೆ ಬರೆದಿದ್ದಾರೆ. "ಅರವಿಂದರ ಅದ್ಭುತ ಪ್ರತಿಭೆಯು ಹೊಳೆಯುವ ನಕ್ಷತ್ರದಂತೆ ಮೇಲೇರಿತು. ಅವರು ಉನ್ನತಾಕಾಶದಲ್ಲಿ ಕೆಲಕಾಲ ಮಾತ್ರವಿದ್ದರೂ ಅವರ ಪ್ರತಿಭಾ ಪ್ರಕಾಶ ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ಪ್ರವಹಿಸಿತು". ಬಹುಮಟ್ಟಿಗೆ ಅಂತರ್ಮುಖವಾದ ಅರವಿಂದರ ಬದುಕಿನ ಮಹಾನ್ ಸಾಧನೆಯನ್ನು ಗಮನಿಸಿದಾಗ ಈ ಮಾತಿನ ವಾಸ್ತವಿಕತೆ ತಿಳಿಯುತ್ತದೆ.

ಮಾನವ ಜೀವನವನ್ನು ಭೋರ್ಗರೆಯುವ ಒಂದು ಮಹಾಪ್ರವಾಹಕ್ಕೆ ಹೋಲಿಸಿದಾಗ ಸಾಮಾನ್ಯರು ಕೇವಲ ಆ ಪ್ರವಾಹದ ತುಂತುರು ಹನಿಗಳು ಮಾತ್ರ. ಆದರೆ ಮಹಾ ಚೈತನ್ಯಗಳು ಆ ಪ್ರವಾಹಕ್ಕೆ ಎದುರಾಗಿ, ಜೀವನದ ನಿಜವಾದ ಅರ್ಥವನ್ನು ಗ್ರಹಿಸಿ ಮಾನವ ಊರ್ಧ್ವಗಾಮಿಯಾಗಿ ಬೆಳೆಯಲು ಹೊಸ ದಾರಿಗಳನ್ನು ಕಂಡುಕೊಳ್ಳುತ್ತವೆ. ವ್ಯಕ್ತಿಯ ಬದುಕಿಗೆ ಒಂದು ಉನ್ನತವೂ ಉದಾತ್ತವೂ ಆದ ಗುರಿಯೊಂದಿದೆ ಎಂದು ಸಾರುತ್ತವೆ. ಮಹಾವ್ಯಕ್ತಿಗಳು ಯಾವುದೇ ದೇಶ ಕಾಲಗಳಿಗೆ ಸೇರಿದ್ದರೂ ತಮ್ಮ ವಿಚಾರ, ಸಾಧನೆ, ಸಿದ್ಧಿಗಳಿಂದ ಅತ್ಯಂತ ಬೆಲೆಯುಳ್ಳ ಮೌಲಿಕ ಕಾಣಿಕೆಯನ್ನು ಯುಗಕ್ಕೆ ನೀಡಿ ಯುಗಪುರುಷರೆನಿಸಿಕೊಳ್ಳುತ್ತಾರೆ. ಶ್ರೀ ರಾಮಕೃಷ್ಣರು, ಸ್ವಾಮಿ ವಿವೇಕಾನಂದರು ಮೊದಲಾದ ಮಹನೀಯರು ಈ ವರ್ಗಕ್ಕೆ ಸೇರಿದರು. ಅರವಿಂದರೂ ಸಹ ಆ ಗುಂಪಿಗೆ ಸೇರಿದವರಾಗಿದ್ದು ಸ್ವಾತಂತ್ರ್ಯಯೋಧ, ಕವಿ, ಯೋಗಿ, ದಾರ್ಶನಿಕರಾಗಿ ತಮ್ಮ ಆಧ್ಯಾತ್ಮ ಸಾಧನೆಗಳಿಂದ ವಿಶ್ವಮಾನ್ಯರಾದರು.

ಅರವಿಂದರು ಜನಿಸಿದಾಗ ಭಾರತದಲ್ಲಿ ಹತ್ತಾರು ಒಳ ಹೊರಶಕ್ತಿಗಳ ಘರ್ಷಣೆಯಿಂದ ಒಂದು ಸಂದಿಗ್ಧ ಪರಿಸ್ಥಿತಿ ಏರ್ಪಟ್ಟಿತ್ತು. ಅರವಿಂದರು ಅಂಥ ಪರಿಸ್ಥಿತಿಗೆ ಹೇಗೆ ಪ್ರತಿಕ್ರಿಯಿಸಿದರು ಯಾವುದನ್ನು ಗ್ರಹಿಸಿ, ಯಾವುದನ್ನು ತ್ಯಾಜ್ಯ ಮಾಡಿ, ರಾಷ್ಟ್ರದ ಜನತೆಗೆ ಬೆಳಕು ತೋರಿಸಿದರು ಎಂಬುದು ಮಹತ್ವದ ಸಂಗತಿಯಾಗುತ್ತದೆ. ಕರ್ಮಕ್ಷೇತ್ರದಲ್ಲಿದ್ದುಕೊಂಡು ನಾಡಿನ ಬಿಡುಗಡೆಗೆ, ನಾಡ ನಿರ್ಮಾಣಕ್ಕೆ ತಮ್ಮ ಅಮೂಲ್ಯ ಕಾಣಿಕೆ ಸಲ್ಲಿಸಿ, ಬಳಿಕ ತಪೋಜ್ಞಾನಗಳ ಕ್ಷೇತ್ರಕ್ಕೆ ತೆರಳಿ ಪೂರ್ಣಯೋಗವನ್ನು ಸಾಧಿಸಿ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಉನ್ನತಿಯ ತುತ್ತತುದಿಯನ್ನು ಮುಟ್ಟುವ ಮೂಲಕ ಇಡೀ ಮಾನವ ಜನಾಂಗಕ್ಕೆ ಬೆಳಕು ನೀಡಿದ ಮಹಾಚೇತನ ಅರವಿಂದರು.

ಆಗಸ್ಟ್ 15, ಭಾರತೀಯರಿಗೆ ಪವಿತ್ರವಾದ ದಿನ. ಆ ದಿನ ನಮ್ಮ ಮಾತೃಭೂಮಿ ಪರಕೀಯರ ಆಳ್ವಿಕೆಯಿಂದ ಮುಕ್ತಿ ಪಡೆದ ದಿನ. ಶ್ರೀ ರಾಮಕೃಷ್ಣ ಪರಮಹಂಸರು ಮಹಾ ಸಮಾಧಿಯನ್ನು ಪಡೆದ ಪುಣ್ಯದಿನ, ಅರವಿಂದರು 1872 ಆಗಸ್ಟ್ 15 ರಂದು ಕಲ್ಕತ್ತಾ ನಗರದಲ್ಲಿ ಜನಿಸಿದರು. ತಂದೆ ಕೃಷ್ಣಧನಘೋಷ, ತಾಯಿ ಸ್ವರ್ಣಲತಾ ದೇವಿ. ತಂದೆ ವೃತ್ತಿಯಿಂದ ವೈದ್ಯರಾಗಿದ್ದು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದರು. ಕೃಷ್ಣಧನಘೋಷರು ಮಿತಿಮೀರಿದ ಆಂಗ್ಲ ಅಭಿಮಾನಿಗಳಾಗಿದ್ದರು. ಮಕ್ಕಳನ್ನು ಆಂಗ್ಲ ಪರಿಸರದಲ್ಲಿಯೇ ಬೆಳೆಸಬೇಕೆಂಬುದು ಅವರ ಉತ್ಕಟ ಅಪೇಕ್ಷೆ ಆಗಿದ್ದಿತು. ಆದ್ದರಿಂದಲೇ ಮಕ್ಕಳನ್ನು ಡಾರ್ಜಲಿಂಗ್‌ನ ಕಾನ್ವೆಂಟ್ ಶಾಲೆಗೆ ಸೇರಿಸಿದರು. ಮುಂದೆ ಕೃಷ್ಣಧನಘೋಷರು ತಮ್ಮ ಮಕ್ಕಳಿಗೆ ಇಂಗ್ಲೆಂಡಿನಲ್ಲಿಯೇ ಶಿಕ್ಷಣ ದೊರಕಿಸುವ ಉದ್ದೇಶದಿಂದ ತಮ್ಮ ಮೂವರು ಮಕ್ಕಳೊಡನೆ ಪತ್ನೀ ಸಮೇತರಾಗಿ ಇಂಗ್ಲೆಂಡಿಗೆ ಬಂದರು. ಅಲ್ಲಿ ಅವರಿಗೆ ಪರಿಚಿತರಾದ ಡ್ರುವೆಟ್ ಅವರಲ್ಲಿ ಮಕ್ಕಳನ್ನು ಬಿಟ್ಟು ಅವರ ವಿದ್ಯಾಭ್ಯಾಸದ ಹೊಣೆಯನ್ನು ಅವರಿಗೆ ಒಪ್ಪಿಸಿ ತಾವು ಭಾರತಕ್ಕೆ ಹಿಂದಿರುಗಿದರು. ಅರವಿಂದ ಮತ್ತು ಅವರ ಸಹೋದರರ ವಿದ್ಯಾಭ್ಯಾಸ ಮ್ಯಾಂಚೆಸ್ಟರ್‌ನಲ್ಲಿ ಪ್ರಾರಂಭವಾಯಿತು. ಅಸಾಮಾನ್ಯ ಬುದ್ಧಿಶಕ್ತಿಯನ್ನು ಪಡೆದಿದ್ದ ಅರವಿಂದರು ಬಹುಬೇಗ ಗ್ರೀಕ್, ಲ್ಯಾಟಿನ್ ಭಾಷೆಗಳಲ್ಲಿ ಅದ್ಭುತವಾದ ಪ್ರಗತಿ ಸಾಧಿಸಿದರು. ಸದಾ ಏಕಾಂತವನ್ನು ಬಯಸುತ್ತಿದ್ದ ಅವರು ಬಾಲ್ಯದಲ್ಲಿಯೆ ಅಂತರ್ಮುಖಿಗಳಾಗಿದ್ದರು. ನಿರಂತರ ವ್ಯಾಸಂಗ, ಚಿಂತನೆ ಇವುಗಳಿಂದ ಅವರ ಮನಸ್ಸು ಹೃದಯಗಳು ಸದ್ಗುಣಗಳಿಂದ ಸಂಸ್ಕಾರಗೊಳ್ಳುತ್ತಿತ್ತು. ಈ ಮಧ್ಯೆ ಮ್ಯಾಂಚೆಸ್ಟರ್‌ನಲ್ಲಿ ಡ್ರುವೆಟ್‌ರ ಆಶ್ರಯ ತಪ್ಪಿ ಲಂಡನ್ನಿಗೆ ಬರಬೇಕಾಯಿತು. ಆ ಸಮಯದಲ್ಲಿ ಅರವಿಂದರು ಮತ್ತು ಅವರ ಸಹೋದರರು ತೀವ್ರವಾದ ತೊಂದರೆಗಳನ್ನು ಅನುಭವಿಸಬೇಕಾಯಿತು. ಊಟ, ವಸತಿ ದೊರೆಯುವುದಕ್ಕೆ ಕಷ್ಟವಾಯಿತು. ತಂದೆಯಿಂದ ಬರುತ್ತಿದ್ದ ಹಣವು ನಿಂತುಹೋಗಿತ್ತು. ಆದರೆ ಅವುಗಳನ್ನು ಹೇಗೋ ಬಗೆಹರಿಸಿಕೊಂಡು ತಮಗೆ ದೊರೆಯುತ್ತಿದ್ದ ವಿದ್ಯಾರ್ಥಿ ವೇತನದಲ್ಲಿ ಜೀವನವನ್ನು ನಿರ್ವಹಿಸಿಕೊಂಡು ವ್ಯಾಸಂಗವನ್ನು ಮುಂದುವರಿಸಿದರು. ಅರವಿಂದರು ಕೇಂಬ್ರಿಡ್ಜಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಇಂಡಿಯನ್ ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದರು. ಆದರೆ ಅಶ್ವಾರೋಹಣ ಪರೀಕ್ಷೆಗೆ ಭಾಗವಹಿಸದೆ ಇದ್ದ ಕಾರಣಕ್ಕಾಗಿ ಅವರಿಗೆ ಆ ಪದವಿ ದೊರೆಯಲಿಲ್ಲ. ಈ ಮಧ್ಯದಲ್ಲಿ ಬರೋಡದ ಸಯ್ಯಾಜಿರಾವ್ ಗಾಯಕವಾಡರಿಂದ ತಮ್ಮ ಸಂಸ್ಥಾನಕ್ಕೆ ಅಧಿಕಾರಿಯಾಗಿ ಬರಬೇಕೆಂಬ ಆಹ್ವಾನ ಬಂದಿತು. ಅರವಿಂದರು ಆಹ್ವಾನವನ್ನು ಸ್ವೀಕರಿಸಿ ಭಾರತಕ್ಕೆ ಹಿಂದಿರುಗಿದರು. ಹದಿನಾಲ್ಕು ವರ್ಷಗಳ ವಿದೇಶ ವ್ಯಾಸಂಗವನ್ನು ಮುಗಿಸಿಕೊಂಡು ಭಾರತಕ್ಕೆ ಹಿಂದಿರುಗಿದಾಗ ಅರವಿಂದರು ಇಪ್ಪತ್ತೊಂದು ವರ್ಷದ ತರುಣರು.

ಬಂಗಾಳಿ ಸಾಹಿತ್ಯ ಸರಸ್ವತಿಯ ವೀಣಾನಾದ, ಹಿಮಾಲಯ ಪರ್ವತ ಪಂಕ್ತಿಯ ಮಂದಮಾರುತ, ಭಾಗೀರಥಿಯ ಮಂಜುಳ ನಿನಾದ, ವೇದೋಪನಿಷತ್ತುಗಳ ದಿವ್ಯಘೋಷ ಅವರ ಕಿವಿಗಳಲ್ಲಿ ಅನುರಣಿತವಾಗುತ್ತಲೇ ಇದ್ದಿತು. ಅವರ ತಂದೆಯವರೇ ಕಳುಹಿಸುತ್ತಿದ್ದ ಬಂಗಾಳಿ ಪತ್ರಿಕೆಗಳಿಂದ ತಾಯಿನಾಡಿನ ದುಃಸ್ಥಿತಿಯು ಅರಿವಾಯಿತು. ತಾಯಿನಾಡಿನ ಬಿಡುಗಡೆಗಾಗಿ ಹೋರಾಟ ನಡೆಸುವುದು ತಮ್ಮ ಕರ್ತವ್ಯವೆಂದು ಭಾವಿಸಿದರು. ಲಂಡನ್ ನಗರದಲ್ಲಿದ್ದಾಗಲೆ 'ಕಮಲ ಮತ್ತು ಕಠಾರಿ' ಎಂಬ ಗುರುತಿನ ರಹಸ್ಯ ಸಂಘವನ್ನು ಸ್ಥಾಪಿಸಿ ಆ ಮೂಲಕ ಅಲ್ಲಿದ್ದ ಭಾರತೀಯರಲ್ಲಿ ರಾಷ್ಟ್ರೀಯತೆಯ ಭಾವವನ್ನು ಬಿತ್ತಿದ್ದರು. ಹೀಗೆ ಅಪಾರ ದೇಶಭಕ್ತಿಯನ್ನು ಹೊಂದಿ, ಭಾರತೀಯ ಸಂಸ್ಕೃತಿಯ ಮೇಲಿನ ಅಭಿಮಾನದಿಂದ ಭಾರತಕ್ಕೆ ಹಿಂದಿರುಗಿದರು.

ಭಾರತಕ್ಕೆ ಬಂದ ಮೇಲೆ ಬರೋಡಾ ಸಂಸ್ಥಾನದಲ್ಲಿ ಸೇವೆ ಸಲ್ಲಿಸುತ್ತಿದ್ದರೂ ಕರ್ತವ್ಯದ ಕರೆಗೆ ಓಗೊಟ್ಟರು. ಪುಣೆಯಿಂದ ಹೊರಡುತ್ತಿದ್ದ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–50 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ನಿತ್ಯ ಅರ್ಚನೆ | ಬೆಳಗ್ಗೆ 5–00 ರಿಂದ 5–15 | ಬೆಳಗ್ಗೆ 6–00 ರಿಂದ 6–15 |
| (ರೂ 150/- ವಾರ್ಷಿಕ ಶುಲ್ಕ ನೀಡಿದ ಗೃಹಸ್ಥರನ್ನು ಅನುಮತಿಸಲಾಗುವುದು) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–15 ರಿಂದ 6–15 |
| ಸರ್ವದರ್ಶನ | ,, 5–45 ರಿಂದ 7–00 | ,, 6–15 ರಿಂದ 1–00 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಇಬ್ಬರಿಗೆ ಅನುಮತಿ ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 1–00 ರಿಂದ 1–30 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 1–30 ರಿಂದ 7–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/- ಗೃಹಸ್ಥರಿಗೆ 5 ಗ್ರಾಂಗಳ ಬೆಳ್ಳಿಯ ಪದಕ ಬಹೂಕರಣವಿದೆ) | — |
| ರಾತ್ರಿ ಗಂಟೆ | ರಾತ್ರಿ [illegible]–00 ರಿಂದ 8–30 | ರಾತ್ರಿ 7–00 ರಿಂದ 7–30 |
| ಸರ್ವದರ್ಶನ | — | ,, 7–30 ರಿಂದ 8–30 |
| ಏಕಾಂತಸೇವೆ | ,, 8–30 ರಿಂದ 9–00 | ,, 8–30 ರಿಂದ 9–00 |

**ಪೇಷ್ಕಾರ್.**

‘ಇಂದು ಪ್ರಕಾಶ’ ಎಂಬ ಪತ್ರಿಕೆಗೆ ಲೇಖನಗಳನ್ನು ಬರೆದರು. ಅವುಗಳ ಮೂಲಕ ಭಾರತದ ರಾಜಕೀಯ ವಿಚಾರಗಳಿಗೆ ಒಂದು ಸ್ಪಷ್ಟ ಉದ್ದೇಶವನ್ನು ಒದಗಿಸಿದರು. ಕ್ರಾಂತಿಕಾರಿ ವಿಚಾರಗಳನ್ನು ಪ್ರಚುರ ಪಡಿಸಿದರು. ಅರವಿಂದರ ತಮ್ಮ ಬೀರೇಂದ್ರಕುಮಾರರು ಅಣ್ಣನೊಂದಿಗೆ ಕೂಡಿಕೊಂಡರು. ಬಂಗಾಳ ಪ್ರಾಂತ್ಯದಲ್ಲೆಲ್ಲಾ ಸುತ್ತಿ ಪ್ರತಿ ಜಿಲ್ಲೆಯಲ್ಲಿಯೂ ಕ್ರಾಂತಿಕಾರಿಗಳ ಸಂಘವನ್ನು ಸ್ಥಾಪಿಸಿದರು. ಕ್ರಾಂತಿಕಾರಿಗಳಿಗೆ ಅರವಿಂದರು ಸ್ಫೂರ್ತಿಯ ಕೇಂದ್ರವಾಗಿದ್ದರು. ಆ ದಿನಗಳಲ್ಲಿ ಪ್ರಸಿದ್ಧ ಕ್ರಾಂತಿಕಾರಿ ಪತ್ರಿಕೆಯಾಗಿದ್ದ ‘ಯುಗಾಂತರ’ದಲ್ಲಿ ಲೇಖನಗಳನ್ನು ಬರೆದರು. ಜೊತೆಗೆ ‘ವಂದೇಮಾತರಂ’ ಪತ್ರಿಕೆಯನ್ನು ನಡೆಸುವ ಹೊಣೆಗಾರಿಕೆಯನ್ನು ತಾವೇ ವಹಿಸಿಕೊಂಡರು. ಆ ಪತ್ರಿಕೆಯಲ್ಲಿ ಅವರು ಬರೆದ ಬರಹಗಳು ಪ್ರತಿಯೊಬ್ಬ ಭಾರತೀಯನ ಹೃದಯದಲ್ಲಿಯೂ ದೇಶಾಭಿಮಾನವನ್ನು ಹುಟ್ಟಿಸಿ ಅವರನ್ನು ಬಡಿದೆಬ್ಬಿಸಿದವು. ಯುವಕರಂತೂ ಅರವಿಂದರ ಲೇಖನಗಳಿಂದ ಎಷ್ಟರಮಟ್ಟಿಗೆ ಪ್ರಭಾವಿತರಾದರೆಂದರೆ ಮಾತೃಭೂಮಿಗಾಗಿ ಆತ್ಮಾರ್ಪಣೆ ಮಾಡಿಕೊಳ್ಳಲು ಸಿದ್ಧರಾದರು. ಈ ಲೇಖನಗಳಿಂದ ಅರವಿಂದ ಪುಷ್ಪ ಸಮಸ್ತ ಭಾರತೀಯರ ಮನೋಮಂದಿರದಲ್ಲಿ ನೆಲಸಿ ದೇಶದ ರಾಜಕೀಯಕ್ಕೆ ಮಾರ್ಗದರ್ಶನ ನೀಡಿತು.

“ದೇಶಭಕ್ತಿ, ಸ್ವಾತಂತ್ರ್ಯ ಪಡೆಯುವ ಹಕ್ಕು ದೇವರಿಂದ ಬಂದ ಹಕ್ಕು, ಅದನ್ನು ಯಾರೂ ಕಡಿದುಕೊಳ್ಳಲಾಗದು, ಅದು ಅವಿನಾಶಿಯಾದದ್ದು” ಎಂದು ಸಾರಿದರು. ಆಂಗ್ಲ ಪ್ರಭುತ್ವ ಅರವಿಂದರ ಮೇಲೆ ರಾಜದ್ರೋಹದ ಆಪಾದನೆ ಹೊರಸಿತು. ಈ ಮಧ್ಯೆದಲ್ಲಿ ಮುಜಫರ್ ಪುರದಲ್ಲಿ ಒಂದು ಘಟನೆ ನಡೆಯಿತು. ದುಷ್ಟಸ್ವಭಾವದ ಆಂಗ್ಲ ಗವರ್ನರ್ ಒಬ್ಬನಿಗೆ ಬೆಂಬಲ ನೀಡುತ್ತಿದ್ದ ಕಿಂಗ್ಸ್ ಫರ್ಡ್ ಎಂಬ ನ್ಯಾಯಾಧೀಶನನ್ನು ಬಲಿ ತೆಗೆದುಕೊಳ್ಳಲು ಕ್ರಾಂತಿಕಾರರು ಪ್ರಯತ್ನಿಸುತ್ತಿದ್ದರು. ಅಂಥ ಒಂದು ಪ್ರಯತ್ನದಲ್ಲಿ ಕಿಂಗ್ಸ್‌ಫರ್ಡ್ ಪ್ರಯಾಣ ಮಾಡುತ್ತಿದ್ದ ಬಂಡಿ ಎಂದು ತಿಳಿದು ಬಾಂಬ್ ಹಾಕಿದಾಗ ಮತ್ತಾರೊ ಸಾವಿಗೀಡಾದರು. ಈ ಪ್ರಕರಣದಲ್ಲಿ ಅರವಿಂದರೂ ಸೇರಿದ್ದಾರೆಂದು ತಿಳಿದು, ಯಾವ ಆಧಾರವೂ ಇಲ್ಲದೆ ಅವರನ್ನು ಬಂಧಿಸಿ ಆಲಿಪುರದ ಸೆರೆಮನೆಯಲ್ಲಿಟ್ಟರು. ಆಗ ಪ್ರಸಿದ್ಧ ನ್ಯಾಯವಾದಿಗಳಾಗಿದ್ದ ಚಿತ್ತರಂಜನ್‌ದಾಸರು ಅರವಿಂದರ ಪರವಾಗಿ ವಕೀಲಿ ವಹಿಸಿ ಅವರ ಮೇಲಿನ ಪೊಳ್ಳು ಅಪಾದನೆಗಳನ್ನು ಗಾಳಿಗೆ ತೂರಿ ತಮ್ಮ ಅದ್ಭುತ ಬುದ್ಧಿಶಕ್ತಿಯಿಂದ ವಾದಮಾಡಿ ಅರವಿಂದರನ್ನು ಬಂಧಮುಕ್ತರನ್ನಾಗಿಸಿದರು. ಆ ಸಮಯದಲ್ಲಿ ಅವರು ಅರವಿಂದರನ್ನು ಕುರಿತು ಆಡಿದ ಮಾತುಗಳು ಗಮನಾಹ

ವಾಗಿದೆ. "ಈ ವಿವಾದವು ನೀರವತೆಯ ಗರ್ಭದಲ್ಲಿ ಅಡಗಿ ಹೋದ ಬಹುಕಾಲ ಬಳಿಕವೂ ಈ ಆರೋಪಿಯನ್ನು ದೇಶಭಕ್ತ ಕವಿಯೆಂದೂ, ರಾಷ್ಟ್ರೀಯತ್ವದ ಪ್ರವಾದಿಯೆಂದೂ, ಮನುಕುಲದ ಪ್ರೇಮಿಯೆಂದೂ ಜನಕೆ ಹೊಗಳುವುದು. ಈತನ ಸಾವಿನ ಬಳಿಕವೂ ಈತನ ಮಾತುಗಳು ಪ್ರತಿಧ್ವನಿತವಾಗುತ್ತಲೇ ಇರುತ್ತವೆ. ಆದ್ದರಿಂದ ಈ ಆಪಾದಿತ ಕೋರ್ಟಿನ ಸಲಾಕೆಗಳ ಎದುರಿಗಷ್ಟೇ ನಿಂತಿಲ್ಲ ಇತಿಹಾಸವೆಂಬ ಕೋರ್ಟಿನ ಸಲಾಕೆಗಳ ಎದುರು ನಿಂತಿದ್ದಾನೆ". ಅರವಿಂದರು ಆಲಿಪುರದ ಸೆರೆಮನೆಯಿಂದ ಬಂದ ಮೇಲೆ ಅವರ ಮನಸ್ಸು ಹೆಚ್ಚಾಗಿ ಅಧ್ಯಾತ್ಮದತ್ತ ಸಾಗಿತ್ತು. ಕರ್ಮಭೂಮಿಯಲ್ಲಿ ತಮ್ಮ ಕೆಲಸ ಮುಗಿಯಿತೆಂದೂ ಇನ್ನು ಜ್ಞಾನಭೂಮಿಯತ್ತ ಸಾಗಬೇಕೆಂದು ನಿರ್ಧರಿಸಿ ಅರವಿಂದರು ರಾಜಕೀಯ ಕ್ಷೇತ್ರದಿಂದ ಪೂರ್ಣವಾಗಿ ಬಿಡುಗಡೆ ಹೊಂದಿದರು.

ಅಧ್ಯಾತ್ಮಿಕ ಸಾಧನೆ :— ಅರವಿಂದರು ಇಂಗ್ಲೆಂಡಿನಿಂದ ಹಿಂತಿರುಗಿ ಬರೋಡ ಸಂಸ್ಥಾನದಲ್ಲಿ ನೆಲಸಿದ ಮೇಲೆ ಬಂಗಾಳಿ, ಸಂಸ್ಕೃತ ಭಾಷೆಗಳನ್ನು ಆಳವಾಗಿ ಅಭ್ಯಾಸಮಾಡಿದರು. ಭಾರತೀಯ ಇತಿಹಾಸ, ಸಾಹಿತ್ಯ ಸಂಸ್ಕೃತಿಗಳು ಅವರನ್ನು ಸೂಜಿಗಲ್ಲಿನಂತೆ ಆಕರ್ಷಿಸಿದವು. ಕ್ರಮೇಣ ಅವರ ಮನಸ್ಸು ಅಧ್ಯಾತ್ಮದ ಕಡೆಗೆ ಹರಿಯಿತು. ರಾಜಕೀಯ ಕ್ಷೇತ್ರದಲ್ಲಿದ್ದರೂ ಅರವಿಂದರ ರಾಜಕೀಯ ಚಟುವಟಿಕೆಗಳು ಅಧ್ಯಾತ್ಮನಿಷ್ಠವಾಗಿತ್ತೆಂಬುದನ್ನು ಗುರುತಿಸಬಹುದು. ಭಗವದ್ಗೀತೆ, ಉಪನಿಷತ್ತುಗಳನ್ನು ಆಳವಾಗಿ ಅಧ್ಯಯನಮಾಡಿ ಅಧ್ಯಾತ್ಮಿಕ ವಿಚಾರಗಳಿಗೆ ಸಂಬಂಧಿಸಿದಂತೆ ಸ್ಪಷ್ಟವೂ ಖಚಿತವೂ ಆದ ನಿಲುವನ್ನು ತಾಳಿದರು. ನರ್ಮದಾ ತೀರದಲ್ಲಿ ನೆಲಸಿದ್ದ ಸದ್ಗುರು ಬ್ರಹ್ಮಾನಂದರ ಅನುಗ್ರಹ ಅರವಿಂದರಿಗೆ ದೊರೆತು ಅವರಿಂದ ಯೋಗಾಭ್ಯಾಸವನ್ನು ಕಲಿತರು. ಮುಂದೆ ಅವರು ಅಸಮಾನ್ಯ ಸಾಧನೆಯಿಂದ ಯೋಗಾಭ್ಯಾಸದಲ್ಲಿ ಪರಿಪೂರ್ಣತೆಯನ್ನು ಸಾಧಿಸಿದರು. ಅರವಿಂದರು ಆಲಿಪುರದ ಸೆರೆಮನೆಯಲ್ಲಿದ್ದಾಗ ಅವರ ಅಧ್ಯಾತ್ಮಿಕ ಸಾಧನೆ ತೀವ್ರ ಪ್ರಗತಿಯನ್ನು ಸಾಧಿಸಿತು. ಆದ್ದರಿಂದ ಅವರೇ ತಮ್ಮ ಸೆರೆಮನೆ ವಾಸವನ್ನು ಆಶ್ರಮವಾಸವೆಂದು ಕರೆದಿದ್ದಾರೆ. ಆ ಅವಧಿಯಲ್ಲಿಯೇ ಅವರಿಗೆ ಸರ್ವವ್ಯಾಪಿಯಾದ ಈಶ್ವರ ಸಾಕ್ಷಾತ್ಕಾರವಾಯಿತು. ಸೃಷ್ಟಿಯ ಪ್ರತಿಕಣದಲ್ಲಿಯೂ ಭಗವಂತನ ಇರುವಿಕೆಯನ್ನು ಗುರುತಿಸಿದರು. ಭಗವಂತನ ದಿವ್ಯ ಸ್ವರೂಪವನ್ನು ಕಂಡು ಆನಂದಿಸಿದರು. ಆಲಿಪುರದಿಂದ ಅರವಿಂದರು ಪಾಂಡಿಚೆರಿಗೆ ಬಂದರು. ಅದು ಅವರ ಯೋಗಸಾಧನೆಗೂ ಪ್ರಶಸ್ತ ಸ್ಥಳವಾಗಿತ್ತು. ಒಮ್ಮೆ ಫ್ರೆಂಚ್ ದಂಪತಿಗಳಾದ ಪಾಲ್‌ರಿಚರ್ಡ್ಸ್ ಮತ್ತು ಮೀರರಿಚರ್ಡ್ಸ್ ಎಂಬುವರು ಪಾಂಡಿಚೆರಿಗೆ ಬಂದು ಅರವಿಂದರನ್ನು ಭೇಟಿ ಮಾಡಿದರು. ಅರವಿಂದರ ದರ್ಶನ ಮತ್ತು ಅವರ ವಿಚಾರಗಳು ಮೀರಾ ರಿಚರ್ಡ್ಸ್ ಅವರ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಿದವು. ಮೀರಾ ರಿಚರ್ಡ್ಸ್ ಫ್ರಾನ್ಸಿಗೆ ಹೋಗಿ ಮತ್ತೆ ಪಾಂಡಿಚೆರಿಗೆ ಬಂದು ಶಾಶ್ವತವಾಗಿ ಅರವಿಂದಾಶ್ರಮದಲ್ಲಿ ನೆಲಸಿಬಿಟ್ಟರು. ಆ ವೇಳೆಯಲ್ಲಿಯೆ ಅರವಿಂದರು ಈ ದಂಪತಿಗಳ ನೆರವಿನಿಂದ 'ಆರ್ಯ' ಪತ್ರಿಕೆಯನ್ನು ಪ್ರಾರಂಭಿಸಿ ಅಧ್ಯಾತ್ಮಿಕ ಕ್ಷೇತ್ರದಲ್ಲಿ ತಮ್ಮ ಅಪೂರ್ವ ಅನುಭವಗಳನ್ನು ಆ ಪತ್ರಿಕೆಯಲ್ಲಿ ಬರೆದರು. ಅರವಿಂದರ ಪೂರ್ಣ ಯೋಗದ ಅಧ್ಯಾತ್ಮ ತಾತ್ತ್ವಿಕ ದರ್ಶನ ಈ ಪತ್ರಿಕೆಯ ಮೂಲಕ ಇಡೀ ವಿಶ್ವಕ್ಕೆ ದೊರೆಯುವ ಹಾಗಾಯಿತು. ಮೀರ ರಿಚರ್ಡ್ಸ್ ಆಶ್ರಮವನ್ನು ಸ್ಥಾಪಿಸಿ ಅರವಿಂದರ ಯೋಗಜೀವನಕ್ಕೆ ಪೂರ್ಣ ಅನುಕೂಲಗಳನ್ನು ಒದಗಿಸಿದರು. ಮುಂದೆ ಅವರು 'ತಾಯಿ' ಎಂಬ ಹೆಸರಿನಿಂದ ಪ್ರಸಿದ್ಧರಾಗಿ ಅರವಿಂದರ ಮಹಾಪ್ರಸ್ಥಾನದ ಬಳಿಕವೂ ಅವರ ದಿವ್ಯಜೀವನದ ಬೆಳಕನ್ನು ನಾಡಿನಲ್ಲೆಲ್ಲಾ ಹರಿಸಿದರು

ಆಶ್ರಮದಲ್ಲಿ ಅರವಿಂದರ ಯೋಗಾಭ್ಯಾಸ ಯಾವ ಅಡ್ಡಿಯೂ ಇಲ್ಲದೆ ಸಾಗಿ ಅರವಿಂದರು ಪೂರ್ಣಯೋಗದ ಅಲೌಕಿಕ ಅನುಭವಗಳನ್ನು ಗಳಿಸಿದರು. ಅವರೇ ತಿಳಿಸುತ್ತಿದ್ದ ಅತಿಮಾನಸ ಪ್ರಜ್ಞೆ ಅವರಿಗೆ ಪ್ರಾಪ್ತಿಯಾಗಿತ್ತು. ಅರವಿಂದರು ವ್ಯಕ್ತಿಗತವಾಗಿ ಅಮೋಘವಾದದ್ದನ್ನು ಗಳಿಸಿದ್ದರೂ ತಮ್ಮ ಸಾಧನೆ ಸಿದ್ಧಿಗಳನ್ನು ಲೋಕಕ್ಕೆ ಪ್ರಕಟಿಸಿ, ಇಡೀ ಮಾನವಕುಲವೇ ಅತಿಮಾನಸಚೇತನವನ್ನು ಪಡೆದು ಸಾರ್ಥಕ್ಯವನ್ನು ಹೊಂದಬೇಕೆಂದು ಆಶಿಸಿ ತಾವು ಸಾಧಿಸಿದ ಯೋಗರಹಸ್ಯವನ್ನು ಇಡೀ ವಿಶ್ವಕ್ಕೆ ನೀಡಿದರು.

ಸಾಹಿತ್ಯಸೃಷ್ಟಿ :— ಅರವಿಂದರು ಅಭಿಜಾತ ಕವಿ. ಅವರ ಸಾಹಿತ್ಯ ಸೃಷ್ಟಿ ಗಾತ್ರದಿಂದಲೂ ಗುಣದಿಂದಲೂ ಮಹತ್ವವನ್ನು ಪಡೆದಿವೆ ಅರವಿಂದರ ಪ್ರಮುಖ ಕೃತಿಗಳು—ಗೀತಾಪ್ರಬಂಧಗಳು, ದಿವ್ಯಾಜೀವನ, ಯೋಗಸಮನ್ವಯ, ವೇದರಹಸ್ಯ, ಮಾನವೀಯ ಐಕ್ಯದ ಆದರ್ಶ, ಸಾವಿತ್ರಿ—ಮೊದಲಾದವು. ಮೊದಲು ಈ ಗ್ರಂಥಗಳು ಲೇಖನಗಳ ರೂಪದಲ್ಲಿ ಪ್ರಕಟವಾದವು 'ದಿವ್ಯಜೀವನ' ಅರವಿಂದರ ಒಂದು ಮಹಾಗದ್ಯಕಾವ್ಯ. ಈ ಗ್ರಂಥದಲ್ಲಿ ಅವರು ಮಾನವ ಬದುಕಿನ ಅರ್ಥ, ಗುರಿ, ಜೀವನದ ಸಮಸ್ಯೆಗಳು, ಸಾವಿನ ಅನಿವಾರ್ಯತೆ, ಸೃಷ್ಟಿಯ ಅಪೂರ್ಣತೆ, ಇವುಗಳನ್ನು ವಿವೇಚಿಸಿದ್ದಾರೆ. ಮಾನವಪ್ರಜ್ಞೆಯ ವಿಕಾಸದ ಬಗೆಯನ್ನು, ಭಗವಂತನ ಸ್ವರೂಪವನ್ನು ಮತ್ತು ಆ ಶಕ್ತಿ ಜಡ, ಪ್ರಾಣ, ಮತ್ತು ಮನಗಳೆಂಬ ಮೂರು ರೀತಿಗಳಲ್ಲಿ ಜಗತ್ತಿನೊಂದಿಗೆ ಹೇಗೆ ಸಂಬಂಧ ಪಡೆದಿದೆ ಎಂಬುದನ್ನು ವಿವರಿಸಿದ್ದಾರೆ

ಅರವಿಂದರ 'ಸಾವಿತ್ರಿ' ಎಂಬ ಕೃತಿಯು ಮಾನವ ಭವಿಷ್ಯದ ಮಹಾಕಾವ್ಯವೆಂದೇ ಪ್ರಸಿದ್ಧವಾಗಿದೆ. ಇಪ್ಪತ್ತನಾಲ್ಕು ಸಾವಿರ ಸಾಲುಗಳಷ್ಟು ದೀರ್ಘವಾದ ಕಾವ್ಯವಿದು. ಇದು ಸಾವಿತ್ರಿ ಸತ್ಯವಾನರ ಕಥೆಯೇ ಆದರೂ ಮಾನವ ಬದುಕಿನ ವಿಕಾಸದ ಹಂತಗಳನ್ನು ಅರ್ಥಪೂರ್ಣವಾಗಿ ಚಿತ್ರಿಸಿರುವ ಮಹಾಕೃತಿ. ಮರಣ ಎಂಬುದು ಮನುಷ್ಯನನ್ನು ಭೀತಿಗೆ ಒಳಗುಮಾಡುವ ಒಂದು ಅಸತ್ಯ. ಮರಣವನ್ನು ಗೆಲ್ಲುವ ಸಾಧನವೆಂದರೆ ಪ್ರೇಮವೊಂದೇ. "ಪ್ರೇಮದ ಕಣ್ಣುಗಳು ಮರಣದ ಕತ್ತಲೆಯಲ್ಲಿ ನಕ್ಷತ್ರದಂತೆ ದಿಟ್ಟಿಸಿ ನೋಡುತ್ತಿದೆ" ಎಂದು ಅರವಿಂದರು ಈ ಕೃತಿಯ ಮೂಲಕ ಸೂಚಿಸಿದ್ದಾರೆ. 'ಯೋಗಸಮನ್ವಯ'—ಈ ಕೃತಿಯ ಹೆಸರೇ ಸೂಚಿಸುವಂತೆ ಭಕ್ತಿಯೋಗ, ಕರ್ಮಯೋಗ ಜ್ಞಾನಯೋಗಗಳನ್ನು ಸಂಗ್ರಹಿಸಿ ಸಮನ್ವಯಿಸಿ ಪೂರ್ಣಯೋಗವನ್ನು ಜಗತ್ತಿಗೆ ನೀಡಿದ್ದಾರೆ. ನಮ್ಮಲ್ಲಿರುವ ಅಹಂಕಾರವನ್ನು ತ್ಯಜಿಸಿ ಭಕ್ತಿಭಾವದಿಂದ ಸರ್ವಸ್ವವನ್ನು ಭಗವಂತನಿಗೆ ಅರ್ಪಿಸಿ ನಮ್ಮ ಆತ್ಮದಲ್ಲಿಯೇ ಇರುವ ಪರಮಾತ್ಮನನ್ನು ಕಾಣುವುದೇ ಪೂರ್ಣಯೋಗ. ಮಾನವ ತನ್ನ ಸಂಕುಚಿತಾರ್ಥಗಳನ್ನು ತೊರೆದು ಉನ್ನತೋನ್ನತವಾಗಿ ಬೆಳೆಯಬೇಕಾದರೆ ಪೂರ್ಣಯೋಗ ಹೇಗೆ ಸಹಕಾರಿ ಎಂಬುದನ್ನು ಅರವಿಂದರು ಈ ಕೃತಿಯಲ್ಲಿ ವಿವರಿಸಿದ್ದಾರೆ.

"ಗೀತಾ ಪ್ರಬಂಧಗಳು" ಅರವಿಂದರ ಒಂದು ವಿಶಿಷ್ಟ ಕೃತಿಯಾಗಿದ್ದು ಗೀತೆಯು ಬೋಧಿಸಿದ ಭಕ್ತಿ, ಜ್ಞಾನ, ಕರ್ಮ ಯೋಗಗಳನ್ನು ಅರ್ಥಪೂರ್ಣವಾಗಿ ವಿವೇಚಿಸಿದ್ದಾರೆ. ಅರವಿಂದರ ಎಲ್ಲ ಕೃತಿಗಳು ಭಾರತೀಯ ತಾತ್ತ್ವಿಕ ಚಿಂತೆಯನ್ನು ವಿಚಾರ ಪ್ರಣಾಲಿಯನ್ನು ಮಂಡಿಸುವುದರ ಜೊತೆಗೆ ಮಾನವ ಕುಲದ ಏಳಿಗೆಯನ್ನು ದೃಷ್ಟಿಯಲ್ಲಿರಿಸಿ ಅವರ ಉದ್ಧಾರಕ್ಕೆ ಮಾರ್ಗದರ್ಶನ ನೀಡುವಂತಹ ಜಾಗತಿಕ ಮಹಾಕಾವ್ಯಗಳಾಗಿವೆ.

ಅರವಿಂದರ ಮಾರ್ಗದರ್ಶನ :— ಅರವಿಂದರ ಉಪದೇಶಾಮೃತ ಅವರ ಬದುಕಿನಲ್ಲಿ ಮತ್ತು ಅವರ ಅನುಭಾವಿ ಕೃತಿಗಳಲ್ಲಿ ವ್ಯಕ್ತವಾಗಿದೆ. ಅವುಗಳನ್ನು ಅಧ್ಯಯನ ಮಾಡಿದಾಗ ವ್ಯಕ್ತವಾಗುವ ವಿಚಾರಗಳೆಂದರೆ—ಆತ್ಮ ನಮ್ಮಿಂದ ಹೊರಗೆ ಇಲ್ಲ. ಆತ್ಮದ ಮಧ್ಯೆದಲ್ಲಿಯೇ ಪ್ರತಿಯೊಬ್ಬ ವ್ಯಕ್ತಿಯೂ ಬದುಕುತ್ತಿರುವುದು. ಆದರೆ ಅದನ್ನು ಕಾಣುವ ಪ್ರಯತ್ನ ಮಾಡಬೇಕು. ಭಗವಂತನನ್ನು ಕಂಡು ಆನಂದಾನುಭವವನ್ನು

(28 ನೇ ಪುಟ ನೋಡಿ)

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಸ್ವಾಮಿ ಹರಿದಾಸ

ಭಾರತವು ಸಾಧು ಸಂತರ ತವರು ಮನೆಯಾಗಿದೆ. ಉತ್ತುಂಗ ಗಿರಿ ಶಿಖರಗಳಿಂದಿಳಿದು ಬರುವ ಸಲಿಲ ಪ್ರವಾಹವನ್ನಾಶ್ರಯಿಸಿ ಶತ ಶತಮಾನಗಳವರೆಗೆ ತಾಪಸಿಗರು ಈ ನೆಲದಲ್ಲಿ ತಪಗೈದು ಸಿದ್ಧಿಯನ್ನು ಹೊಂದಿದ್ದಾರೆ. ಅವರು ತಮಗಾದ ಆನಂದಾನುಭವಗಳನ್ನೆಲ್ಲ ವೇದವಾಣಿಯಲ್ಲಿ ನಮಗಾಗಿ ಬಿಟ್ಟು ಹೋಗಿದ್ದಾರೆ. ಈ ವೇದವಾಣಿಯಲ್ಲಿ ತನ್ಮಯರಾದ ನಮ್ಮ ಹಿರಿಯರು ಆ ಸತ್ಯದ ಸತ್ತ್ವವನ್ನೆಲ್ಲ ಪ್ರಾಕೃತ ಭಾಷೆಯಲ್ಲಿ ರಚಿಸಿ ನಮ್ಮಮೇಲೆ ಪರಮಾನುಗ್ರಹಮಾಡಿದ್ದಾರೆ.

ದಕ್ಷಿಣ ಭಾರತದ ಸಂತ ಶ್ರೇಷ್ಠರೆನಿಸಿದ ಪುರಂದರದಾಸರು, ತ್ಯಾಗರಾಜರು, ಅನ್ನಮಾಚಾರ್ಯರೇ ಮೊದಲಾದವರಂತೆ ಉತ್ತರದಲ್ಲಿ ಖ್ಯಾತರಾದ ಸಂತಶ್ರೇಷ್ಠರ ಮಾಲಿಕೆಯಲ್ಲಿ ಹರಿದಾಸರ ಹೆಸರು ಪ್ರಥಮಶ್ರೇಣಿಯಲ್ಲಿ ಬರುತ್ತದೆ. ಇವರು ಅಂದಿನ ಕಾಲದಲ್ಲಿದ್ದ ಮೊಗಲ್‌ಚಕ್ರವರ್ತಿಯ ಆಸ್ಥಾನ ಗಾಯಕರೆಂದೆನಿಸಿದ ತಾನಸೇನರಿಗೆ ಗುರುಗಳಾಗಿದ್ದವರು. ಅಂದ ಮೇಲೆ ಇವರ ಸಂಗೀತ ಜ್ಞಾನವನ್ನು ಕುರಿತು ಹೆಚ್ಚಿಗೆ ಹೇಳಬೇಕಾಗಿಲ್ಲ.

ಹರಿದಾಸರು ತಮ್ಮ ಜೀವನದ ಸಿದ್ಧಿಗಾಗಿ ಶ್ರೀಕೃಷ್ಣನ ಜನ್ಮಭೂಮಿಯಾದ ವೃಂದಾವನವನ್ನೇ ಆರಿಸಿಕೊಂಡರು. ಬಾಲಗೋಪಾಲನ ರೂಪವು ಅವರ ಮನ ಮೆಚ್ಚಿದ ಆರಾಧನಾ ದೈವವಾಗಿತ್ತು. ಆ ರೂಪವನ್ನು ಸಾಕ್ಷಾತ್ಕರಿಸಿಕೊಳ್ಳಲು ಅವರ ಹೃದಯಾಂತರಾಳದಿಂದ ಅನೇಕ ಗೀತಗಳು ಹೊರ ಹೊಮ್ಮತೊಡಗಿದವು. ವೃಂದಾವನದಲ್ಲಾಗಿ ಹೋದ ಸಂತಶ್ರೇಷ್ಠರಿಗೇನೂ ಕೊರತೆಯಿಲ್ಲವಾದರೂ, ಹರಿದಾಸರ ಕೀರ್ತನ ಸುಧೆಯ ನಾದ ವೈಖರಿಯೇ ಬೇರೆಯಾಗಿತ್ತು. ಮುರಲೀಧರ ಶ್ರೀಕೃಷ್ಣ ಅವರ ರೋಮರೋಮಗಳಲ್ಲಿ ವ್ಯಾಪಿಸಿದ್ದ. ಆದುದರಿಂದಲೇ ಶ್ರೀಕೃಷ್ಣನು ತನ್ನ ಸಖಿಯರೊಡಗೂಡಿ ಯಾವ ಯಮುನೆಯದಡದಲ್ಲಿ ಮನಸ್ವಿಯಾಗಿ ರಾಸಕ್ರೀಡೆಯನ್ನಾಡಿದನೋ ಅದೇ ಸ್ಥಳದಲ್ಲಿ ಇಂದು ನಾವು ಹರಿದಾಸರ ದಿವ್ಯಧಾಮ ನೋಡುವಂತಾದುದು, ಶ್ರೀಕೃಷ್ಣ ಭಕ್ತರಿಗೆಲ್ಲ ಹೆಮ್ಮೆಯನ್ನುಂಟುಮಾಡುವ ಮಾತಾಗಿರುವುದು.

ಸ್ವಾಮಿ ಹರಿದಾಸರು ತಮ್ಮ ಜೀವಿತ ಕಾಲದಲ್ಲಿಯೇ ಜಗನ್ನಾಥನ ದೇವ ಮಂದಿರವನ್ನು ಸ್ಥಾಪಿಸಿದರು. ಒಂದು ನಸುಕಿನಜಾವದಲ್ಲಿ ಸ್ವಪ್ನದಲ್ಲಿ ಅವರ ಆರಾಧ್ಯದೇವನು ಕಾಣಿಸಿಕೊಂಡು ಜಗನ್ನಾಥಪುರಿಯಲ್ಲಿರುವ ವಿಗ್ರಹವನ್ನು ತಂದು ವೃಂದಾವನದಲ್ಲಿ ಪ್ರತಿಷ್ಠಾಪಿಸುವಂತೆ ಸೂಚನೆಯನ್ನಿತ್ತ. ತಕ್ಷಣವೇ ಹರಿದಾಸರು ಶಿಷ್ಯಸಮೇತರಾಗಿ ಜಗನ್ನಾಥಪುರಿಯ ಯಾತ್ರೆಯನ್ನಾರಂಭಿಸಿದರು.

ವಿಶ್ವವಿಖ್ಯಾತವಾದ ಪುರಿಯಲ್ಲಿ ಜಗನ್ನಾಥನ ರಥೋತ್ಸವವು ಸಾಗಿತ್ತು. ಉತ್ಸವದಲ್ಲಿ ಪಾಲ್ಗೊಂಡವರು, ಹಳೆಯ ವಿಗ್ರಹವನ್ನು ತಮಗೆ ಕೊಡಬೇಕೆಂದು ಅರ್ಚಕರಲ್ಲಿ ಪ್ರಾರ್ಥನೆ ಸಲ್ಲಿಸಿದರು. ಆಗ ಅರ್ಚಕರು, ಈ ಕೆಲಸಕ್ಕಾಗಿ ಆ ನಾಡಿನ ಅರಸರನ್ನು ಕಂಡು ಅವರ ಅಪ್ಪಣೆಯಂತೆ ನಡೆದುಕೊಳ್ಳಲು ತಿಳಿಸಿದರು.

ಮರುದಿನ ಹರಿದಾಸರು ನಾಡಿನ ಪ್ರಭುಗಳನ್ನು ಕಂಡು ತಮಗಾದ ಸ್ವಪ್ನ ವೃತ್ತಾಂತವನ್ನು ತಿಳಿಸಿ ಹಳೆಯ ವಿಗ್ರಹಗಳನ್ನು ತಮಗೆ ಒಪ್ಪಿಸುವ ಕೃಪೆ ಮಾಡಬೇಕೆಂದು ಕೇಳಿಕೊಂಡರು. ಆಗ ಅಲ್ಲಿಯ ಪ್ರಭುಗಳು.



ಸ್ವಾಮಿ ಹರಿದಾಸರ ಸ್ನಾಧಿ

“ಪೂಜ್ಯರೇ ಮೂವತ್ತು ವರುಷಗಳಿಗೊಮ್ಮೆ ಮರದ ಈ ವಿಗ್ರಹಗಳನ್ನು ಬದಲಿಸುವುದು ಸಂಪ್ರದಾಯವಾಗಿ ಬರಿದಿದೆ. ಈ ಕಲಾಕೃತಿಯನ್ನು ಬದಲಿಸುವಾಗ ಬಹುದೊಡ್ಡ ಪ್ರಮಾಣದಲ್ಲಿ ಪೂಜಾದಿಗಳು ನಡೆಯುತ್ತವೆ. ಆದರೆ ಇಂದಿನವರೆಗೆ ಹಿಂದೆ ಪೂಜಿಸಲಾದ ಕಲಾಕೃತಿಯನ್ನು ನಮ್ಮ ಹಿಂದಿನವರು ಯಾರೂ ಇನ್ನೊಬ್ಬರಿಗೆ ಕೊಟ್ಟಿರುವ ಉದಾಹರಣೆಗಳಿಲ್ಲ. ತಮ್ಮನ್ನು ಕಂಡೊಡನೆ ನನ್ನ ಹೃದಯದಲ್ಲಿ ಭಕ್ತಿ ಭಾವಗಳು ಮೂಡಿವೆ. ಹೀಗಿದ್ದರೂ ಪರಂಪರೆಯನ್ನು ಮೀರಿ ನಡೆಯಲು ನನ್ನ ಮನಸ್ಸು ಒಪ್ಪದಂತಾಗಿದೆ. ತಮಗೆ ಸೂಚನೆಯಾದಂತೆ ಈವರೆಗೆ ಆ ದೇವನಿಂದ ಯಾವದೇ ರೀತಿಯ ಸೂಚನೆಯೂ ನನಗಾಗಿಲ್ಲ. ಆದುದರಿಂದ ಆ ಕಲಾಕೃತಿಯನ್ನು ಸಮುದ್ರರಾಜನಿಗೆ ಅರ್ಪಿಸುವುದನ್ನು ನಿಲ್ಲಿಸಲು ಸಾಧ್ಯವಿಲ್ಲ. ಈ ಮಾತನ್ನು ತಮಗೆ ಅನಿವಾರ್ಯವಾಗಿ ತಿಳಿಸಬೇಕಾಗಿದೆ.”

“ರಾಜನ್ ಹಾಗಾದರೆ ಆ ದೇವನೊಂದಿಗೆ ಈ ದೇಹವನ್ನೂ ಕೂಡ ಸಮುದ್ರರಾಜನಿಗೆ ಸಮರ್ಪಿಸಲು ನಾವು ಸಿದ್ಧರಾಗಿದ್ದೇವೆ”.

ಹರಿದಾಸರು ಅಂದಿನಿಂದ ಸಮುದ್ರದ ದಂಡೆಯಲ್ಲಿ ನಿರಶನ ವ್ರತಸ್ಥರಾಗಿ ಕುಳಿತು ಬಿಟ್ಟರು.

ಚಿತ್ರಲೇಖನ:
**ಶ್ರೀ ಆದ್ಯರಾಮಾಚಾರ್ಯ**



ಬೃಂದಾವನದ ಹೊರನೋಟ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ವೈಕುಂಠಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

ಭಕ್ತ ಪರಾಧೀನನಾದ ಜಗನ್ನಾಥನು ರಾಜನ ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ 'ತನ್ನ ವಿಗ್ರಹವನ್ನು ಹರಿದಾಸರಿಗೊಪ್ಪಿಸು. ಅದರಿಂದಲೇ ಕಲ್ಯಾಣವಿದೆ' ಎಂಬುದಾಗಿ ತಿಳಿಸಿದನು. ತಕ್ಷಣವೇ ರಾಜನು ಹರಿದಾಸರನ್ನು ಹುಡುಕಿಕೊಂಡು ಬಂದು ದಿವ್ಯವಾದ ರಥದಲ್ಲಿ ಜಗನ್ನಾಥಸ್ವಾಮಿಯೊಂದಿಗಿರುವ ಬಲರಾಮ ಹಾಗೂ ಸುಭದ್ರಾದೇವಿಯ ವಿಗ್ರಹಗಳೊಂದಿಗೆ ಅಪರಿಮಿತವಾದ ಧನ ಧಾನ್ಯವನ್ನಿತ್ತು ವೃಂದಾವನದವರೆಗೆ ತಲುಪಿಸಿ ಬರುವಂತೆ ತನ್ನ ಸೇನೆಯನ್ನು ಕಳುಹಿಸಿದ. ಹರಿದಾಸರ ಮನೋರಥವು ಪೂರ್ಣವಾಯಿತು. ಅವರ ಬೃಂದಾವನದಲ್ಲಿ ಭವ್ಯವಾದ ದೇವಮಂದಿರವನ್ನು ಕಟ್ಟಿಸಿ ಅಹೋರಾತ್ರಿ ಆ ದೇವನನ್ನು ಪೂಜಿಸತೊಡಗಿದರು.

ಸಂತ ಹರಿದಾಸರ ಜೀವನದ ಸಾಧನೆಗೆ ಇದೊಂದು ಉದಾಹರಣೆಯಾಗಿ ಇಂದಿಗೂ ವೃಂದಾವನದಲ್ಲಿ ಆ ದೇವ ಮಂದಿರವನ್ನು ನಾವು ಕಾಣಬಹುದು. ಅವರು ದ್ರುಪದ ಶೈಲಿಯಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದರು. ಆ ಕೀರ್ತನೆಯನ್ನು ಹೇಳುತ್ತ ಭಕ್ತರು ನರ್ತಿಸತೊಡಗಿದರು ಅವರಿಂದ ರಚಿತವಾದ ಗೀತಗಳಿಂದ ನರ್ತಿಸುವ ಸೇವೆಯನ್ನೇ ರಾಸಕ್ರೀಡೆ ಎಂದು ಕರೆಯುತ್ತಾರೆ. ಶ್ರೀಮದ್ಭಾಗವತ ಗ್ರಂಥದಲ್ಲಿ ವೃಂದಾವನವಿಹಾರಿಯಾದ ಶ್ರೀಕೃಷ್ಣನು ತನ್ನ ಸಖಿಯರಿಂದೊಡಗೂಡಿ ರಾಸಲೀಲೆಯನ್ನಾಡಿದನೆಂಬ ಕಥೆಯು ಬರುತ್ತದೆ. ಸಖಿಯರು ತಮ್ಮ ಆರಾಧ್ಯದೈವ ಶ್ರೀಕೃಷ್ಣನಲ್ಲಿ ಏಕಾತ್ಮ ಭಾವದಿಂದ ಆನಂದ ತುಂದಿಲರಾಗಿ ಹಾಡಿ ಕುಣಿದು ನರ್ತಿಸಿದಂತೆಯೇ ಹರಿದಾಸರೂ ಸಹ ತಮ್ಮ ದ್ರುಪದ ಗೀತದಲ್ಲಿ ರಾಸಕ್ರೀಡಾಭಾವವನ್ನು ರಾಗಬದ್ಧವಾಗಿ ಜೋಡಿಸಿ ಎಲ್ಲರೂ ಒಂದೇ ಮನಸ್ಸಿನಿಂದ ಮೈಮರೆತು ದೇವನ ಧ್ಯಾನದಲ್ಲಿ ನಲಿಯುವಂತೆ ಮಾಡಿದರು.

ವೃಂದಾವನದ ಪರಿಸರದ ಭಕ್ತರು, ಸ್ವಾಮಿ ಹರಿದಾಸರು, ರಾಧೆಯ ಪ್ರತಿರೂಪವೆಂದೇ ಭಾವಿಸುತ್ತಾರೆ. ರಾಸಕ್ರೀಡೆ ಎಂಬುದು ಜೀವಾತ್ಮ ಹಾಗೂ ಪರಮಾತ್ಮಾ ಇವರ ಸಂಯೋಗವೆಂಬ ಭಾವನೆ ಇದೆ. ಚೈತ್ರ ಶುದ್ಧ ಷಷ್ಠಿಯ ದಿನದಂದು ಯಮುನಾದೇವಿಯ ಜನ್ಮದಿನವನ್ನಾಚರಿಸುತ್ತಾರೆ ಅಂದು ನಡೆಯುವ ರಾಸಕ್ರೀಡೆ ನೋಡಲು ಎರಡು ಕಣ್ಣುಗಳೂ ಸಾಲವೆಂದೆನಿಸುತ್ತದೆ. ವರ್ಷಋತುವಿನಲ್ಲಿ ಇಂಥ ಅನೇಕ ರಾಸಕ್ರೀಡೆಗಳನ್ನು ನಾವು ಇಂದಿಗೂ ನೋಡಬಹುದಾಗಿದೆ.

ಹರಿದಾಸರ ಜನ್ಮವಾದುದು ವಿಕ್ರಮನಾಮ ಸಂವತ್ಸರ 1535 ನೇ ಇಸವಿಯಲ್ಲಿ. ಅವರು ತಮ್ಮ ಇಹಲೋಕ ಯಾತ್ರೆಯನ್ನು ಪೂರ್ಣಗೊಳಿಸಿದ್ದು 1630 ರಲ್ಲಿ. ಈ ಮಹಾನುಭಾವರು ತೊಂಬತ್ತೈದು ವರುಷಗಳವರೆಗೆ ಶ್ರೀಕೃಷ್ಣನ ಕೀರ್ತನೆಯಲ್ಲಿ ತಮ್ಮ ಜೀವಿತವನ್ನು ಕಳೆದರು.

ಸಂತಹರಿದಾಸರು ನಿಂಬಾರ್ಕ ಸಂಪ್ರದಾಯವಾದಿಗಳಾದ ಶ್ರೀ ಆಸಧೀರರ ಶಿಷ್ಯರಾಗಿದ್ದರು. ಮಹಾತ್ಯಾಗಿಗಳೆಂದೂ, ದಯಾಸಾಗರರೆಂದೂ ನಿಃಸ್ಪೃಹಿಗಳೆಂದೂ, ಮಹಾಭಗವದ್ಭಕ್ತರೆಂದೂ ಅದ್ವಿತೀಯ ಸಂಗೀತಜ್ಞರೆಂದೂ ಲೋಕ ಪ್ರಸಿದ್ಧಿಯನ್ನು ಹೊಂದಿದ್ದರು. ಅವರಿಂದ ರಚಿತವಾದ ಕೃತಿಗಳೆಲ್ಲ ಶ್ರೀಕೃಷ್ಣನ ಬಾಲಲೀಲೆಗಳನ್ನೇ ಮೂಲಾಧಾರವಾಗಿಟ್ಟುಕೊಂಡು ರಚಿತವಾಗಿವೆ. ಆನಂದರೂಪಿಯಾದ ಆ ದೇವನಲ್ಲಿ ತನ್ಮಯನಾಗಿ ಸಂಗೀತನಾದ ಸುಧೆಯಲ್ಲಿ ಒಂದುಗೂಡುವುದೇ ಅವರ ಜೀವನದ ಪರಮಗುರಿಯಾಗಿತ್ತು. ಅವರ ಗೀತಗಳಲ್ಲಿ ಭಕ್ತನ ಆರ್ತಭಾವವನ್ನು ಕಾಣಬಹುದಾಗಿದೆ. ತಾದಾತ್ಮ್ಯಭಾವದ ಸ್ಪಂದನವನ್ನು ಅನುಭವಿಸಬಹುದಾಗಿದೆ. ಭಕ್ತಿಯಿಂದಲೇ ಬ್ರಹ್ಮಾನಂದವನ್ನು ಸಿದ್ಧಿಸಿಕೊಳ್ಳಬಹುದೆಂಬುದನ್ನು ಅವರ ಗೀತಗಳು ಸಾರಿ ಸಾರಿ ಹೇಳುತ್ತದೆ.

ಹರಿದಾಸರಿಂದ ರಚಿತವಾದ ಸಾಹಿತ್ಯರಾಶಿಯ ಹಸ್ತಪ್ರತಿಗಳ ನಿಧಿಯನ್ನು ಬೃಂದಾವನದಲ್ಲಿರುವ ಹರಿದಾಸ ಸೇವಾ ಸಂಸ್ಥೆಯು ಬಹುವ್ಯವಸ್ಥಿತವಾದ ರೀತಿಯಲ್ಲಿ ರಕ್ಷಿಸಿಕೊಂಡು ಬಂದಿರುವುದು ಸಮಾಧಾನದ ವಿಷಯವೆನಿಸಿದೆ.

ಆ ಮಹಾನುಭಾವರಿಂದ ರಚಿತವಾದ ಒಂದು ಪದ್ಯವನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಹೇ ಮನ ಸಬ ರಸಾ ಕೋ ರಸಸಾರ
ಲೋಕ ವೇದ ಕುಲ ಕರಮೆ ತಾಜಿಯೆ
ಭಜೀಯೇ ನಿತ್ಯವಿಹಾರ ।
ಗೃಹ ಕಾಮಿನೀ ಕಂಚನ ಧನ ತ್ಯಾಗೇ
ಸುಮಿರೋ ಸ್ವಾದು ಉದಾರ ।
ಕಹೇ ಹರಿದಾಸ ರೀತಿ ಸಂತನ ಕೇ
ಗಾರೀಕೋ ಅಧಿಕಾರ ।

ಸಂತ ಹರಿದಾಸರ ಜೀವನದಲ್ಲಿ ಒಂದು ಅಪೂರ್ವವಾದ ಘಟನೆ ನಡೆಯುತ್ತದೆ. ಈ ಮಹಾನುಭಾವರ ಸಂಗೀತಸುಧೆಯ ಸೌರಭವು ಮೊಗಲ್ ಸಾಮ್ರಾಟನಾಗಿದ್ದ ಅಕಬರ ಬಾದಶಹನ ಕಿವಿಯವರೆಗೆ ತಲುಪುತ್ತದೆ. ತನ್ನ ಆಸ್ಥಾನದ ಸಂಗೀತ ವಿದ್ವನ್ಮಣಿಯಾಗಿದ್ದ ತಾನಸೇನನನ್ನು ಕರೆಸಿ ಹರಿದಾಸರನ್ನು ತನ್ನ ದರ್ಬಾರಿಕ್ಕೆ ಕರೆತರುವಂತೆ ಆತನು ಸೂಚನೆಮಾಡಿದ. ಆದರೆ ತಾನಸೇನನು ತನ್ನಿಂದ ಈ ಕೆಲಸವಾಗಲಾರದು. ಅವರು ತಮ್ಮ ಆರಾಧ್ಯ ದೇವನ ವಿನಃ ಇನ್ನಾರ ಮುಂದೆಯೂ ಹಾಡಲಾರರು ಎಂಬ ಮಾತನ್ನು ಪ್ರಾಂಜಲ ಭಾವದಿಂದ ಅರಿಕೆ ಮಾಡಿಕೊಂಡ. ಆಗ ಬಾದಶಹನು ವೇಷಾಂತರದಿಂದ ಬೃಂದಾವನಕ್ಕೆ ಬಂದು ಹರಿದಾಸರು ತಮ್ಮ ದೇವನ ಮುಂದೆ ಕುಳಿತು ಮನಸೋಕ್ತವಾಗಿ ಹಾಡುತ್ತಿರುವುದನ್ನು ಕೇಳಿ ತನ್ನನ್ನೇ ತಾನು ಮರೆತು ಕುಳಿತುಬಿಟ್ಟ. ಅವರ ಸಂಗೀತ ಸೇವೆ ಮುಗಿದಾಗ ಬಾದಶಹನು ಅವರ ಮುಂದೆ ಕೈ ಜೋಡಿಸಿ ನಿಂತುಕೊಂಡು "ಪೂಜ್ಯರೇ ತಮ್ಮ ಸಂಗೀತವನ್ನಾಲಿಸಿ ಧನ್ಯನಾಗಿರುವೆ, ತಮಗೆ ಬೇಕಾದುದನ್ನು ಕೇಳಿರಿ. ಕೊಡಲು ಸಿದ್ಧನಿರುವೆ" ಎಂದು ಬೇಡಿಕೊಂಡ. ಆಗ ಸಂತ ಹರಿದಾಸರು.

"ತಾವು ಈ ಲೋಕಕ್ಕೆ ಬಾದಶಹರಿರಬಹುದು ಆದರೆ ನನ್ನ ಈ ದೇವನು ಹದಿನಾಲ್ಕು ಲೋಕದ ಒಡೆಯನಾಗಿದ್ದಾನೆ. ಇನ್ನು ತಾವು ಬೇಕಾದುದನ್ನು ಕೊಡುತ್ತೇನೆ ಎಂದು ಹೇಳಿದ್ದೀರಿ. ಆದುದರಿಂದ ನಾವು ಕೇಳುವುದಿಷ್ಟೇ. ಇನ್ನೊಮ್ಮೆ ಹೀಗೆ ಬಂದು ನಮ್ಮ ದೇವತಾರಾಧನೆಯಲ್ಲಿ ಆತಂಕವನ್ನೊಡ್ಡಬೇಡಿರಿ".

ವಿರಕ್ತಶಿಖಾಮಣಿಗಳಾದ ಸಂತ ಹರಿದಾಸರ ಮಾತನ್ನು ಕೇಳಿ ಅಕಬರಬಾದಶಹನು ನತಮಸ್ತಕನಾಗಿ ವಂದಿಸಿ ಹೊರಟುಹೋದ.

ವೃಂದಾವನದ ಭಕ್ತರು ಹರಿದಾಸರ ಜೀವನದಲ್ಲಿ ನಡೆದ ಅನೇಕ ಘಟನೆಗಳನ್ನು ಬಹು ರಸವತ್ತಾಗಿ ಹೇಳುತ್ತಾರೆ. ಒಂದುಸಲ ಕನೌಜದ ಪ್ರಸಿದ್ಧ ವ್ಯಾಪಾರಿಯೊಬ್ಬನು ಸಂತರದರ್ಶನಾರ್ಥಿಯಾಗಿ ಬಂದಿದ್ದಾಗ ಅಮೂಲ್ಯವಾದ ರತ್ನಹಾರವನ್ನು ಆತನು ಹರಿದಾಸರಿಗರ್ಪಿಸಿದ. ತಕ್ಷಣವೇ ಅದನ್ನು ಅವರು ನೆಲದಮೇಲೆ ಚಲ್ಲಿದರು. ಆದರಿಂದ ವಿಸ್ಮಿತನಾದ ಆ ವ್ಯಾಪಾರಿಯು ತನ್ನಿಂದ ಏನಾದರೂ ಅಪರಾಧವಾಯಿತೆ ? ಎಂದು ಕೇಳಿದ ಆಗ ಹರಿದಾಸರು.

"ನಾನು ಬಾಕೇ ಬಿಹಾರಿಯೊಂದಿಗೆ ಹೋಲೀಯಾಟವನ್ನಾಡುವದರಲ್ಲಿ ತಲ್ಲೀನನಾಗಿ ಹೋಗಿದ್ದೆ. ಆನಂದಸಾಗರದಲ್ಲಿ ಮುಳುಗಿಹೋದಾಗ ನೀವು ಏನನ್ನೊ ತಂದಿರಿಸಿದಿರಿ. ಅವನ್ನು ನಾನು ಗಿರಿಧರ ಗೋಪಾಲನ ಪಾದಗಳಿಗರ್ಪಿಸಿದೆ." ಎಂದು ನುಡಿದರು.

ಆ ವ್ಯಾಪಾರಿಯು ದೇವಾಲಯವನ್ನು ಪ್ರವೇಶಮಾಡಿ ನೋಡಿದಾಗ ಜಗನ್ನಾಥನ ಪಾದಾರವಿಂದದಲ್ಲಿ ಅಮೂಲ್ಯವಾದ ರತ್ನಹಾರವು ಥಳಥಳನೆ ಹೊಳೆಯುತ್ತಿರುವದನ್ನು ಕಂಡು ಆತನ ಮನವು ಧನ್ಯತೆಯಿಂದ ತುಂಬಿ ಬಂದಿತೆಂದು ಹೇಳುತ್ತಾರೆ.

ಸಂತ ಸ್ವಾಮಿ ಹರಿದಾಸರು ಕಾಲವಾಗಿ ವರುಷಗಳು ಗತಿಸಿಹೋಗಿದೆಯಾದರೂ ಅವರಿಂದ ರಚಿತವಾದ ಸಂಗೀತದ ನಾದ ಸುಧೆಯನ್ನು ನಾವು ವೃಂದಾವನದ ಮೂಲೆಮೂಲೆಗಳಲ್ಲಿ ನಿನದಿಸುವದನ್ನು ಕೇಳಬಹುದಾಗಿದೆ. ಇತ್ತೀಚೆಗೆ ಭಾರತದ ಸರ್ಕಾರವು ಈ ಮಹಾನುಭಾವರ ಚಿತ್ರದೊಂದಿಗೆ ಅಂಚೆಯ ಚೀಟಿಗಳನ್ನು ಮುದ್ರಿಸಿದೆ. ಸಂತ ಹರಿದಾಸರು ಭಾರತದ ಅಮೂಲ್ಯ ರತ್ನರಾಗಿದ್ದು ಅವರ ಸ್ಮರಣ ಮಾತ್ರದಿಂದ ಭಕ್ತರು ಪುನೀತರಾಗುವದರಲ್ಲಿ ಸಂದೇಹವಿಲ್ಲ. *

# ಶ್ರೀಕ್ಷೇತ್ರ ಕೈವಾರ



ಭೀಮಲಿಂಗೇಶ್ವರಸ್ವಾಮಿ

ಕರ್ನಾಟಕ ರಾಜ್ಯದಲ್ಲಿರುವ ಹಲವಾರು ಪುಣ್ಯಕ್ಷೇತ್ರಗಳ ಪೈಕಿ ಶ್ರೀ ಕೈವಾರಕ್ಷೇತ್ರವೂ ಒಂದು. ಇದು ಬಂಗಾರದ ಬೀಡೆನಿಸಿದ ಕೋಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನಲ್ಲಿದೆ. ಕನ್ನಡ ನಾಡಿನಲ್ಲಿ ನೆಲೆಸಿರುವ ಪಂಚನಾರಾಯಣರ ಪೈಕಿ ಇಲ್ಲಿ ಶ್ರೀ ಅಮರ ನಾರಾಯಣಸ್ವಾಮಿ ನೆಲೆಯಾಗಿದ್ದಾನೆ. ಜೊತೆಗೆ ಪಾಂಡವರಿಂದ ಪ್ರತಿಷ್ಠಾಪಿಸಲ್ಪಟ್ಟ ಪಂಚಲಿಂಗಗಳು ಇಲ್ಲಿವೆ. ಹರಿ – ಹರರ ಸಾಮರಸ್ಯ ಸಾರುವ ಈ ಕ್ಷೇತ್ರದಲ್ಲಿ ಕೈವಾರ ತಾತಯ್ಯನವರೆಂದು ಪ್ರಖ್ಯಾತರಾಗಿ ಹೋದ ಶ್ರೀ ಯೋಗಿ ನಾರೇಯಣ ಯತೀಂದ್ರರ ಬೃಂದಾವನವೂ ಸಹ ಇದೆ.

ಕೈವಾರ ಕ್ಷೇತ್ರಕ್ಕೆ ಒಳ್ಳೆಯ ಪೌರಾಣಿಕ ಹಿನ್ನೆಲೆ ಇದೆ. ಶಾಪಗ್ರಸ್ತನಾದ ಇಂದ್ರನು ತನ್ನ ಪಾಪ ನಿವಾರಣಾರ್ಥವಾಗಿ ಕೈವಾರಕ್ಕೆ ಬಂದು, ಕೃತಯುಗದಲ್ಲಿ ಶ್ರೀ ಅಮರ ನಾರಾಯಣಸ್ವಾಮಿ ಮೂರ್ತಿಯನ್ನು ಪ್ರತಿಷ್ಠಾಪಿಸಿ ಪಾವನನಾದನಂತೆ. ದೇವತೆಗಳು ಬಂದು ಶ್ರೀ ಮೂರ್ತಿಯನ್ನು ಕೈವಾರ ಮಾಡಿದ (ಸ್ತೋತ್ರಮಾಡಿದ) ಕಾರಣ 'ಕೈವಾರ' ಎಂಬ ನಾಮಧೇಯ ಈ ಪಾವನಮಯ ಕ್ಷೇತ್ರಕ್ಕೆ ಬಂದಿತಂತೆ. ತ್ರೇತಾ ಯುಗದಲ್ಲಿ ಪುರಾಣಪುರುಷನಾದ ಶ್ರೀರಾಮಚಂದ್ರನು ಸೀತಾಲಕ್ಷ್ಮಣ ಸಮೇತನಾಗಿ ಈ ಕ್ಷೇತ್ರಕ್ಕೆ ಭೇಟಿ ಇತ್ತು ಅಮರನಾರಾಯಣನನ್ನು ಅರ್ಚಿಸಿದನೆಂದು ಪ್ರತೀತಿ. ದ್ವಾಪರ ಯುಗದಲ್ಲಿ ಪಾಂಡವರು ವಾಸಮಾಡಿದ ಊರಾದ ಏಕಚಕ್ರನಗರವೇ ಕೈವಾರ. ಭೀಮಸೇನನು ಲೋಕಕಂಟಕನಾದ ಬಕಾಸುರನನ್ನು ಕೊಂದು, ಕೈವಾರದ ಬೆಟ್ಟದಲ್ಲಿರುವ ಗುಹೆಯೊಂದರಲ್ಲಿ ತುರುಕಿದನಂತೆ. ಅವನನ್ನು ಕೊಂದ ಪಾಪನಿವಾರಣೆಗಾಗಿ ಭೀಮ ಮತ್ತು ಉಳಿದ ಸೋದರರು ಕೂಡಿ ಪಂಚಲಿಂಗಗಳನ್ನು ಪ್ರತಿಷ್ಠಾಪಿಸಿದರಂತೆ. ಇವುಗಳಲ್ಲಿ ಭೀಮಲಿಂಗೇಶ್ವರ ತುಂಬಾ ಪ್ರಸಿದ್ಧಿ ಹೊಂದಿದ ದೇವರು. ಉಳಿದ ನಾಲ್ಕು ಲಿಂಗಗಳು ಕೈವಾರ ಬೆಟ್ಟದ ತಪ್ಪಲಿನಲ್ಲಿಯೆ ಈಗಲೂ ಇವೆ. ಕಲಿಯುಗನ ಅಧ್ಯಾತ್ಮ ಚಕ್ರವರ್ತಿಗಳೂ, ಮಹಾನ್ ದ್ರಷ್ಟಾರರೂ ಎನಿಸಿದ ಯೋಗಿ ಕೈವಾರ ನಾರಾಯಣಪ್ಪನವರು ಇದೇ ಊರಿನಲ್ಲಿ ಅವತರಿಸಿದರು. ಅವರ ಸಾಧನೆಯ ಅವಿಮುಕ್ತಕ್ಷೇತ್ರ ಕೂಡ ಇದೇ ಆಗಿತ್ತು. ಇವರ ಬೃಂದಾವನ ಕೂಡ ಇಲ್ಲಿಯೇ ಇದೆ. ಹರಿ–ಹರ ಯೋಗಿತ್ರಯರ ಕೈವಾರಕ್ಷೇತ್ರವು ಒಂದು ಪಾವನಮಯ ತಪೋಭೂಮಿಯಾಗಿದೆ.

ಚಾರಿತ್ರಿಕ ಹಿನ್ನೆಲೆಯ ಜಾಡನ್ನು ಹಿಡಿದು ಮುನ್ನಡೆದಾಗ ಕೈವಾರವು ಒಂದು ಇತಿಹಾಸ ಪ್ರಸಿದ್ಧವಾದ ಒಂದು ಪುಣ್ಯ ಕ್ಷೇತ್ರ ಕಲಾತ್ಮಕವಾದ ದೇಗುಲಗಳ ಬೀಡು. ಹರಿ–ಹರರು ಯಾವ ಭೇದವೂ ಇಲ್ಲದೆ ನೆಲಸಿರುವ ಪುಣ್ಯಭೂಮಿ. ಅಮೂಲ್ಯವಾದ ಪಾರಮಾರ್ಥಿಕ ಗ್ರಂಥಗಳು ರಚನೆಗೊಂಡ ಸಾಹಿತ್ಯದ ಗೂಡು. ಇಲ್ಲಿನ ಬಹುಪಾಲು ದೇವಾಲಯಗಳು ಚೋಳರ ಶೈಲಿಯಲ್ಲಿ ರಚನೆಗೊಂಡಿವೆ. ವಿಜಯನಗರದ ಅರಸರು ಮುಂದೆ ಈ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದಂತೆ ತಿಳಿದು ಬರುತ್ತದೆ. ಇಲ್ಲಿ ಕನ್ನಡದ ಹಾಗೂ ತಮಿಳಿನ ಶಿಲಾಶಾಸನಗಳೂ ಕೂಡ ದೊರಕಿವೆ. ಅಮರನಾರಾಯಣನ ಗುಡಿಯ ಗೋಪುರ, ದಶಾವತಾರದ ರಮ್ಯ ಚಿತ್ರಗಳು ಈಚೆಗೆ ವಿಶ್ವಸ್ಥ ಸಮಿತಿಯಿಂದ ನಿರ್ಮಾಣವಾದವು. ಇಲ್ಲಿನ ದೇವಾಲಯಗಳಿಗೆ ಸು. ೭೦೦ ವರ್ಷಗಳ ಇತಿಹಾಸವಿದೆ.



ತಾತಯ್ಯನವರ ಬೃಂದಾವನ

ಕೈವಾರಕ್ಕೆ 'ಕೈವಲ್ಯಪುರಿ' ಎಂಬ ಮತ್ತೊಂದು ಹೆಸರಿದೆ. ಈ ಹೆಸರು ಬರಲು ಕೈವಾರ ತಾತಯ್ಯನವರು ಬಹುಮಟ್ಟಿಗೆ ಕಾರಣ. ಅವರು ಅವತಾರ ಪುರುಷರು, ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡ ಮಹಿಮಾವಂತರು. ಯೋಗಿಗಳು, ಕವಿಗಳು, ಮಹಾನ್ ಸಾಧಕರು. ಇವರು ಜನಿಸಿದ್ದು, ಬೆಳೆದಿದ್ದು ಇಲ್ಲಿಯೇ. ಕ್ರಿ. ಶ. ೧೭೨೬ ರಲ್ಲಿ ಜನಿಸಿದರು. ವೃತ್ತಿಯಲ್ಲಿ ಬಳೆಗಾರರು. ಸಂಸಾರದಲ್ಲಿ ವೈರಾಗ್ಯ ಹೊಂದಿ ಸಂನ್ಯಾಸಿಗಳಾದರು. ತಿರುಪತಿಯಿಂದ ಹಿಂದಿರುಗಿ ಬರುವಾಗ ಪರದೇಶಿ ಸ್ವಾಮಿಗಳ ಉಪದೇಶಕ್ಕೆ ಒಳಗಾಗಿ, ಕೈವಾರದ ಬೆಟ್ಟದಲ್ಲಿ ತಪಸ್ಸಿಗೆ ಕುಳಿತರು. ಸುಜ್ಞಾನಪಡೆದು ದೇವರನ್ನು ಸಾಕ್ಷಾತ್ಕಾರ ಪಡಿಸಿಕೊಂಡರು. ಸಾವಿರಾರು ಪವಾಡ ಮಾಡಿದರು. ತಾತಯ್ಯ ಎಲ್ಲ ಯೋಗಿಗಳಂತಲ್ಲ. ಅವರು ಅಮೂಲ್ಯವಾದ ಸಾರಸ್ವತ ಸಂಪತ್ತು ನೀಡಿ ಹೋಗಿದ್ದಾರೆ. ಅವರು ಪರತತ್ತ್ವದ ವರಕವಿ. ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಬ್ರಹ್ಮಾಂಡ ಪುರಿ ಶತಕ, ತಾರಕ ಬ್ರಹ್ಮಾನಂದ ದ್ವಯ ಕಂದ ಶತಕ, ನಾದಬ್ರಹ್ಮಾನಂದ ನಾರೇಯಣ ಕವಿ ಶತಕ– ಎಂಬ ಶತಕ ತ್ರಯ ಕೃತಿಗಳನ್ನು ಬರೆದಿದ್ದಾರೆ. ಶ್ರೀ ಕೃಷ್ಣ ಚರಿತಾಮೃತ ಯೋಗಸಾರವನ್ನಲ್ಲದೆ ಅಮೂಲ್ಯವಾದ ಕಾಲಜ್ಞಾನವನ್ನು ಬರೆದಿದ್ದಾರೆ. ಒಂದೊಂದೂ ನಿಧಿಗಳು. ಅವರ ಕಾಲಜ್ಞಾನವಾಣಿ ಒಂದೊಂದೂ ಆಣಿಮುತ್ತಿನಂತಹವು. ಅವರು ನುಡಿದುದೆಲ್ಲಾ ಸತ್ಯವಾಗಿವೆ. ಅವರ ಕೀರ್ತನೆಗಳು ಕಾವ್ಯಾಂಶದಿಂದ ಕೂಡಿ ಭಕ್ತಿಯ ಪರಾಕಾಷ್ಠತೆಯನ್ನು ಮುಟ್ಟಿವೆ.

ಕೈವಾರದಲ್ಲಿ ನೋಡಲು ಹಲವಾರು ಪ್ರೇಕ್ಷಣೀಯ ಸ್ಥಳಗಳಿವೆ. ಅಮರ ನಾರಾಯಣನ ದೇವಾಲಯ, ಯತೀಂದ್ರರ ಬೃಂದಾವನ, ಭೀಮಲಿಂಗೇಶ್ವರನ ಗುಡಿ, ಧರ್ಮರಾಯಲಿಂಗ, ಅರ್ಜುನಲಿಂಗ, ನಕುಲಲಿಂಗ, ಸಹದೇವಲಿಂಗ, ಕೈವಾರ ಬೆಟ್ಟ, ನರಸಿಂಹಸ್ವಾಮಿ ಗುಹೆ, ಬಕನ ಬಂಡೆ, ಗೂಡುಭಾವಿ, ಶಕ್ತಿದೇವಾಲಯ ಮುಂತಾದವು ಮುಖ್ಯವಾದವು. ಪ್ರಶಾಂತವಾದ ವಾತಾವರಣ. ತ್ರಿವಿಧ ದಾಸೋಹ ಕೇಂದ್ರ. ಒಮ್ಮೆ ಇಲ್ಲಿಗೆ ಸಂದರ್ಶಿಸಲು ಮರೆಯಬಾರದು. ಅಮರನಾರಾಯಣನ ಸನ್ನಿಧಿಗೆ ಬಂದು, ತಾತಯ್ಯನವರ ತಪೋವನದಲ್ಲಿ ಮಹಿಳೆಯರು ಬಳೆತೊಡುವ ಸಡಗರ ನೋಡಬೇಕು. ಬೃಂದಾವನದ ಮುಂದೆ ಕುಳಿತು ಮಾಡುವ ಭಜನೆ ಕೇಳಬೇಕು. ತುಂಬಾ ಆಪ್ಯಾಯಮಾನ.

ಕೈವಾರದಲ್ಲಿ ಯೋಗಿ ನಾರೇಯಣರ ಹೆಸರಿನಲ್ಲಿ ವಿಶ್ವಸ್ಥ ಸಮಿತಿಯೊಂದು ಅಸ್ತಿತ್ವದಲ್ಲಿವೆ. ಇಲ್ಲಿಗೆ ಬರುವ ಯಾತ್ರಿಕರ ಸೌಲಭ್ಯದ ಕಡೆ ತುಂಬಾ ಗಮನ ವಹಿಸಿದೆ. ಸು. ೮೦ ಕೋಣೆಗಳ ಸುಸಜ್ಜಿತವಾದ 'ಕಾವೇರಿ ವಸತಿ ಗೃಹ', ಎರಡು ಕಲ್ಯಾಣ ಮಂಟಪ, ಸುಂದರವಾದ ಹೂವಿನ ತೋಟ, ತಾತಯ್ಯನವರ ಬೃಂದಾವನ, ಅಮರ ನಾರಾಯಣ ದೇಗುಲದ ಗೋಪುರ, ದಶಾವತಾರ ಮೂರ್ತಿಗಳು, ಸಾಹಿತ್ಯ ಸಮ್ಮೇಲನದ ನೆನಪಿನ ಎರಡು ಆಕರ್ಷಕವಾದ ಸ್ವಾಗತ ಮಂಟಪ–ಮುಂತಾದ ಚಿರಸ್ಮರಣೀಯ ಕಾರ್ಯ ಮಾಡಿದೆ. ಯೋಗೀಂದ್ರರ ಕೃತಿಗಳನ್ನು ನಾಲ್ಕಾರು ಭಾಷೆಗಳಲ್ಲಿ ಅನುವಾದಿಸಿ, ಪ್ರಕಟಿಸಿದೆ. ಮುತ್ತೈದೆಯರಿಗೆ ಉಚಿತವಾಗಿ ಬಳೆ ತೊಡಿಸುವ ಪದ್ಧತಿ ಜಾರಿಗೆ ತಂದಿದೆ. ಪ್ರತಿನಿತ್ಯ ಯಾತ್ರಿಕರಿಗೆ ಊಟದ ವ್ಯವಸ್ಥೆ ಏರ್ಪಡಿಸಿದೆ. ಮಿಗಿಲಾಗಿ ಯತೀಂದ್ರರ ಆರಾಧನೆಯ ಸುಸಂದರ್ಭದಲ್ಲಿ ೧೫೦ ಕ್ಕೂ ಹೆಚ್ಚಿನ ಸಾಮೂಹಿಕ ವಿವಾಹಗಳನ್ನು ಮಾಡುತ್ತದೆ. ದೇಶದ ಮೂಲೆ ಮೂಲೆಗಳಿಂದ ಬಂದು ಈ ಕ್ಷೇತ್ರ ನೋಡಬೇಕು, ತಾತಯ್ಯನವರ ತತ್ತ್ವ ಪ್ರಚಾರದಲ್ಲಿ ಮುಂದಾಗಬೇಕು. ಇದೇ ನಮ್ಮ ಹೆಬ್ಬಯಕೆ ಎನ್ನುತ್ತಾರೆ ಸಮಿತಿಯವರು. ನೀವೂ ಒಮ್ಮೆ ಕೈವಾರಕ್ಷೇತ್ರ ಸಂದರ್ಶಿಸಿ ಕೃತಾರ್ಥರಾಗಿ.


ಕೈವಾರದ ಯೋಗಿ ನಾರಾಯಣಸ್ವಾಮಿ


ಸುಸಜ್ಜಿತ ವಸತಿಗೃಹ.

ಚಿತ್ರಲೇಖನ :
**ಶ್ರೀ ಕವಿತಾಕೃಷ್ಣ**

# ಪ್ರಸ್ತುತ ವಿಮರ್ಶೆ

**ರಾಮಾಯಣ ಪ್ರದೀಪ**
ಬರೆದು ಪ್ರಕಟಿಸಿದವರು:
ಶ್ರೀದೇವಿ.
3018 ನೂರಡಿರಸ್ತೆ
ನೆಹರೂನಗರ
ಮಂಡ್ಯ – 571401
1986 ಪು XVI+115 ಬೆಲೆ ರೂ10-00

## ರಾಮಾಯಣದ ವಿವೇಚನೆ

ವಾಲ್ಮೀಕಿ ಮಹರ್ಷಿಗಳ ಶ್ರೀಮದ್ರಾಮಾಯಣವನ್ನು ಆದಿಕಾವ್ಯವೆಂದು ರಸಲೋಲರಾದ ಮಹಾಕವಿಗಳೂ ಸಹೃದಯರೂ ಮನಸೋಚ್ಛೆ ಆಸ್ವಾದಿಸಿ ಆನಂದಿಸಬಹುದು. ಸಾಮಾಜಿಕ ಮೌಲ್ಯ ಹಾಗೂ ರಾಜನೀತಿಗಳ ಮನಮೋಹಕ ಪ್ರತಿಪಾದನೆಯೆಂದೂ, ಭಾರತೀಯ ಲೌಕಿಕರೂ ಗೌರವಿಸಬಹುದು. ಬಾಲಕರು ಸ್ವಾರಸ್ಯವಾದ ಅದರ ಕಥೆಗೇ ಮಾರುಹೋಗಿ ನಲಿದಾಡಬಹುದು. ಧರ್ಮಸೂಕ್ಷ್ಮಗಳ ಲಲಿತ ವಿವರಣೆಯೆಂದು ಇತರರು ಸ್ವಾಗತಿಸಬಹುದು. ಸಕಲ ಮಾನವಕುಲಕ್ಕೂ ಸದಾ ಪ್ರಸ್ತುತವಾದ ಪರಮಪುರುಷಾರ್ಥ ಅಥವಾ ಕೇವಲ ಆನಂದಮಯವಾದ ಮೋಕ್ಷದ ವಿವೇಚನೆಯೇ ಅದರ ಅಂತರಾರ್ಥ ಮತ್ತು ಪರಮತಾತ್ಪರ್ಯವೆಂದು ವೇದಾಂತಿಗಳು ಸಿದ್ಧಾಂತಿಸಬಹುದು. ಭಾರತೀಯ ಪರಂಪರೆಯಲ್ಲಿ ಇವೆಲ್ಲಕ್ಕೂ ಸ್ಥಾನವಿದೆ. ಪರಂಪರೆಯನ್ನು ಸುಳ್ಳಿನ ಕಂತೆಯೆಂದು ಕಡೆಗಣಿಸಿ, ಪ್ರಕ್ಷಿಪ್ತಭಾಗ – ಮೂಲರಚನೆ, ಕಾಲ-ದೇಶ ಮುಂತಾದ ಶುಷ್ಕಚರ್ಚೆಗಳನ್ನು ಅತಿಲಂಬಿಸಿ, ರಾಮಾಯಣ ಒಬ್ಬ ಕವಿಯ ರಚನೆಯೇ ಅಲ್ಲ; ಅಲ್ಲಿ ರಾಮನು ಭಗವಂತನ ಅವತಾರವೇ ಎಂದು ವಾದಿಸಿ ಮುಂದಿನ ಅನಾಮಧೇಯ ಪ್ರಕ್ಷೇಪಕಾರರ ಕುಕೃತ್ಯ ಎಂದು ನಿರ್ಣಯಿಸಿ ಮತಧರ್ಮ ಹೇಗೆ ಒಂದು ಕಾವ್ಯವನ್ನು ಕೆಡಿಸಬಹುದೆಂಬುದಕ್ಕೆ ರಾಮಾಯಣವೇ ನಿದರ್ಶನವೆಂದು ಪಾಶ್ಚಾತ್ಯ ಸಂಶೋಧನೆಯ ಜಾಡನ್ನು ಹಿಡಿದವರು ವಾದಿಸಲೂ ಬಹುದು.

ಹೀಗೆ ರಾಮಾಯಣವನ್ನು ಕುರಿತು ಭಿನ್ನ ದೃಷ್ಟಿಗಳಿಂದ ಭಿನ್ನವಿಚಾರಗಳನ್ನು ಪ್ರಕಟಿಸಿರುವ ಗ್ರಂಥಗಳು ಕನ್ನಡದಲ್ಲಿಯೇ ನೂರಾರಿವೆ. ಆದರೆ ಶ್ರೀಮದ್ರಾಮಾನುಜೀಯ ಶ್ರೀವೈಷ್ಣವ ಪರಂಪರೆಯಲ್ಲಿ ಮಾತ್ರ ಶ್ರೀಮದ್ರಾಮಾಯಣಕ್ಕೆ ವೇದಸಮವಾದ ಅತ್ಯುನ್ನತ ಅಗ್ರಸ್ಥಾನವಿರುವುದನ್ನು ಸಾಂಗೋಪಾಂಗವಾಗಿ, ಎಳೆಎಳೆಯಾಗಿ ಬಿಡಿಸಿ, ವಿವರಿಸಿರುವ ಗ್ರಂಥಗಳು ಬಹಳ ವಿರಳ. ಕಥೆಗಾಗಿ ಭಾಷಾಂತರಗಳು, ಕಾವ್ಯ ವಿಮರ್ಶೆಗಾಗಿ ಪ್ರಬಂಧಗಳು, ರಸಸ್ಥಾನಗಳ ಪ್ರದರ್ಶನಕ್ಕಾಗಿ ಹರಿಕಥಾದಿಗಳು, ನಾಟಕಾದಿಗಳು– ಇಲ್ಲವೆ ರಾಮಾಯಣದಿಂದ ಪ್ರಭಾವಪಡೆದು ನೂತನ ಸ್ಫೂರ್ತಿಯಿಂದ ಬಂದ ಪ್ರತಿಭಾಪೂರ್ಣ ನವಕಾವ್ಯಗಳು, ಇವೆಲ್ಲ ಹೇರಳವಾಗಿವೆಯೇ ವಿನಾ ತಮಿಳು ಪಾಶುರಗಳಲ್ಲಿ ಮಹಾಮಹಿಮರಾದ ಆಳ್ವಾರುಗಳೂ, ಅವರನ್ನನುಸರಿಸಿ ಸಂಸ್ಕೃತಾದಿ ಇತರ ಭಾಷೆಗಳಲ್ಲಿ ರಾಮಾನುಜೀಯರೂ ಬರೆದಿರುವ ರಾಮಾಯಣದ ಸಾರ ಅಥವಾ ತಿರುಳನ್ನು ತಿಳಿಸಿಕೊಡುವ ಗ್ರಂಥಗಳು ಇಲ್ಲ. ಈ ಕೊರತೆಯನ್ನು ಪ್ರಕೃತ ವಿದುಷಿಯರು ತಮ್ಮ ಈ ವಿವೇಚನಾಗ್ರಂಥದ ಪ್ರಕಟನೆಯಿಂದ ಒಟ್ಟುಮಟ್ಟಿಗೆ ನಿವಾರಿಸಿ ಕನ್ನಡ ಜನತೆಗೆ ಉಪಕಾರ ಮಾಡಿದ್ದಾರೆ.

ಕಥೆಯ ವ್ಯಾಜದಿಂದ ಧರ್ಮಸ್ವರೂಪವನ್ನೂ, ಭಗವಂತನ ಕೃಪೆಯ ಲಾಭದಿಂದ ಅವನನ್ನು ಸೇರಲು ಜೀವನಿಗೆ ಅಥವಾ ಭಕ್ತನಿಗೆ ಅತ್ಯಗತ್ಯವಾಗಿರುವ 'ಶರಣಾಗತಿ' ಅಥವಾ 'ಪ್ರಪತ್ತಿ'ಯ ಬಹುಮುಖ ಸ್ವರೂಪವನ್ನೂ ಇಲ್ಲಿ ಸಾಧಾರಣವಾಗಿಯೂ ಸೋದಾಹರಣವಾಗಿಯೂ ಉತ್ತಮವಾಗಿ ವಿವೇಚಿಸಲಾಗಿದೆ. 'ಪರಮಾತ್ಮ'ನೇ ಗಂತವ್ಯ ಲಕ್ಷ್ಯ, ಅವನನ್ನು ಮುಟ್ಟಬೇಕಾಗಿರುವವನೇ 'ಜೀವ', ಅದರಿಂದ ಸಿದ್ಧವಾಗುವ ಪರಮಪದವೇ 'ಫಲ'; ಮೋಕ್ಷ ಫಲಸಿದ್ಧಿಗೆ ಅಡ್ಡವಾಗಿ ಬರುವ ಅಡ್ಡಿಗಳೇ 'ವಿರೋಧಿ'ಗಳು. ಅವನ್ನು ದಾಟಿಸಿ ಫಲಕ್ಕೆ ಸಾಧಕವಾಗತಕ್ಕವೇ 'ಉಪಾಯ'ಗಳು. ಉಭಯವೇದಾಂತದ ಈ ಪಂಚಪ್ರಕ್ರಿಯೆಯನ್ನು ಆಮೂಲಾಗ್ರವಾಗಿ ಶ್ರೀ ರಾಮಾಯಣದ ಅಂತರಾರ್ಥ ವಿವೇಚನೆಯ ದ್ವಾರಾ ಲೇಖಕಿಯರು ವ್ಯಾಖ್ಯಾನಿಸಿದ್ದಾರೆ. ಅಲ್ಲಲ್ಲಿ ತಮ್ಮ ವಿವರಣೆಗಳಿಗೆ ಆಧಾರವಾಗಿರುವ ದ್ರಾವಿಡ ಪ್ರಬಂಧಗಳ, ವೇದ–ಉಪನಿಷತ್ತುಗಳ, ಧರ್ಮಶಾಸ್ತ್ರಗಳ ಪ್ರಮಾಣವಚನಗಳನ್ನೂ ಉಲ್ಲೇಖಿಸಿದ್ದಾರೆ; ಆಳವಾಗಿ ವಿಶ್ಲೇಷಿಸಿದ್ದಾರೆ.

ಗ್ರಂಥದ ಶೈಲಿ ಪಾರಿಭಾಷಿಕವಾಗಿ, ಒಮ್ಮೊಮ್ಮೆ ಕನ್ನಡದ ಜಾಯಮಾನಕ್ಕೆ ಒಗ್ಗದ ವಾಕ್ಯರಚನೆಯಿಂದಾಗಿ ಗಡುಚೆನಿಸಿದರೂ, ಒಮ್ಮೊಮ್ಮೆ ಆಡುಮಾತಿನ ವರಸೆ ಶಾಸ್ತ್ರಗ್ರಂಥದ ಗಾಂಭೀರ್ಯಕ್ಕೆ ಅನುಚಿತವೆನಿಸಿದರೂ, ಒಟ್ಟಿನ ಮೇಲೆ ಶ್ರದ್ಧೆಯಿಂದ ಓದುವವರಿಗೆ ಬಹು ದಿಕ್ಕಿನಿಂದ ಶ್ರೀವೈಷ್ಣವ ಪರಂಪರೆಯ ಒಳನೋಟವನ್ನು ಒದಗಿಸುವ ಈ ಕನ್ನಡಾನುವಾದ ಕೃತಿ ಬಹಳ ಉಪಾದೇಯವೆನಿಸುವುದರಲ್ಲಿ ಸಂಶಯವಿಲ್ಲ. ಪ್ರಸಿದ್ಧ ಸಾಹಿತಿಗಳಾದ ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹಾಗೂ ಶ್ರೀ ಯದುಗಿರಿ ಯತಿರಾಜ ನಾರಾಯಣ ಜೀಯರ್ ಅವರ ಶುಭಾಶಂಸನೆಗಳನ್ನು ತಳೆದು ಬಂದಿರುವ ಈ ಕೃತಿ ಆಸ್ತಿಕವೃಂದದಲ್ಲಿ ಮನ್ನಣೆ ಪಡೆಯಲೆಂದು ಹಾರೈಸುತ್ತೇನೆ.

**ಡಾ|| ಕೆ. ಕೃಷ್ಣಮೂರ್ತಿ**

# ವಿಜಯನಗರ ಕಾಲದ ಚಿತ್ರಕಲೆ

ವಿಜಯನಗರದ ಕಾಲದಲ್ಲಿ ಚಿತ್ರಕಲೆಗೆ ಹೊಸ ಚೈತನ್ಯವುಂಟಾಯಿತು. ದೇವಾಲಯಗಳಲ್ಲಿಯೇ ಅಲ್ಲದೆ ಮನೆ ಮನೆಗಳಲ್ಲಿಯೂ ಆ ಕಲೆ ತಾಂಡವವಾಡಲು ಮೊದಲಾಯಿತು. ಆ ಕಾಲದಲ್ಲಿ ಅಲ್ಲಿಗೆ ಬಂದ ವಿದೇಶೀಯ ಪ್ರವಾಸಿಗಳು ಅದನ್ನು ಬಾಯಿತುಂಬ ಪ್ರಶಂಸಿಸಿದ್ದಾರೆ. ಕೃಷ್ಣದೇವರಾಯನ ಕಾಲದಲ್ಲಿ ಭಾರತಕ್ಕೆ ಬಂದಿದ್ದ ಪೇಯ್ಸ್ ಎಂಬ ಪ್ರವಾಸಿಗನು ಹಂಪಿಯಲ್ಲಿದ್ದ ರಾಜಭವನಗಳನ್ನೂ ನೃತ್ಯಶಾಲೆಗಳನ್ನೂ ಅವುಗಳಲ್ಲಿದ್ದ ಶೃಂಗಾರಮಯವಾದ ವರ್ಣರಂಜಿತ ಚಿತ್ರಗಳನ್ನು ವಿಶೇಷವಾಗಿ ಹೊಗಳಿದ್ದಾನೆ. ನೃತ್ಯಶಾಲೆಯಲ್ಲಿ ವಿವಿಧ ಭಂಗಿಗಳ ರಚನೆಗಳಿರುತ್ತಿದ್ದವಂತೆ. ದರ್ಬಾರ್‌ಮಂದಿರದ ಗೋಡೆಗಳ ಮೇಲೆ ಬಿಲ್ಲು ಬಾಣಗಳನ್ನು ಹಿಡಿದಿರುವ ನಾರಿಯರ ಚಿತ್ರವಿದ್ದವಂತೆ. ರಜಾಕ್ ಎಂಬುವನು ರಾಜಾಧಿಕಾರಿಗಳು, ದೇವದಾಸಿಯರು ನಡೆಯುವ ಪಕ್ಕದಲ್ಲಿ ಸಜೀವವಾಗಿ ಭಾಸವಾಗುತ್ತಿರುವ ಸಿಂಹ ಹುಲಿಗಳ ಚಿತ್ರಗಳನ್ನು ಬರೆದಿಡುತ್ತಿದ್ದರೆಂದು ತಿಳಿಸುತ್ತಾನೆ. ಸಾಹಿತ್ಯದ ಆಧಾರದ ಮೇಲೆ ಜನರು ತಮ್ಮ ಶಯ್ಯಾಗಾರವನ್ನು ಕಾಮ ಪ್ರಚೋದಕವಾದ ರತಿಮನ್ಮಥ, ರಂಭಾನಳಕೂಬರ, ಊರ್ವಶಿ ಪುರೂರವ, ಮೇನಕೆ ವಿಶ್ವಾಮಿತ್ರ, ಗೋಪಿಕೃಷ್ಣರ ಚಿತ್ರಗಳಿಂದ ಅಲಂಕರಿಸುತ್ತಿದ್ದರೆಂದು ಊಹಿಸಬಹುದು. ಆದರೆ ಇವಾವುಗಳೂ ಈಗ ಉಳಿದಿಲ್ಲವಾದುದರಿಂದ ಆಗಿನಕಾಲದ ಚಿತ್ರಕಲಾವಿಮರ್ಶೆಗೆ ಕೆಲವು ದೇವಾಲಯಗಳ ಭಿತ್ತಿ ಚಿತ್ರಗಳು ಮಾತ್ರ ಸಾಧನಗಳಾಗಿವೆ. ಅವುಗಳಲ್ಲಿ ನಗರದಲ್ಲಿರುವ ದೇವಾಲಯಗಳ ಚಿತ್ರಗಳು, ಲೇಪಾಕ್ಷಿ, ಸೋಮಪಲ್ಲಿ ಮೊದಲಾದೆಡೆಗಳಲ್ಲಿರುವ ಕಲಾಕೃತಿಗಳು ಮತ್ತು ಆ ಕಾಲದ ಇತರ ಅವಶೇಷಗಳು ಎಂದು ಮೂರು ಭಾಗ ಮಾಡಬಹುದು.

ನಗರದ ಅವಶೇಷಗಳಲ್ಲಿ ವಿರೂಪಾಕ್ಷಸ್ವಾಮಿಯ ದೇವಾಲಯದ ಮೇಲ್ಛಾವಣಿಯಲ್ಲಿ ಕಂಡುಬರುವ ಚಿತ್ರಗಳು ಮುಖ್ಯವಾದುವು. ಇವು ಬಹು ಅಸ್ಪಷ್ಟವಾಗಿವೆ. ಯಾವ ನಿಷ್ಕೃಷ್ಟವಾದ ಸ್ವರೂಪವನ್ನೂ ಸೂಚಿಸುವಂತಿಲ್ಲ. ಹಜಾರರಾಮಸ್ವಾಮಿಯ ದೇವಾಲಯದಲ್ಲಿಯೂ ಕೆಲವು ಆಕರ್ಷಕವಾದ ಚಿತ್ರಗಳಿದ್ದುದಕ್ಕೆ ಸೂಚನೆಗಳಿವೆ. ಇವನ್ನು ಸೂಕ್ಷ್ಮವಾಗಿ ಅಭ್ಯಾಸಮಾಡಿದರೆ ಅವುಗಳ ವೈಶಿಷ್ಟ್ಯ ಅರ್ಥವಾಗದಿರದು.

ಈಗ ಒಂದು ಚಿಕ್ಕ ಹಳ್ಳಿಯಾಗಿರುವ ಲೇಪಾಕ್ಷಿ ವಿಜಯನಗರ ಕಾಲದಲ್ಲಿ ಆ ಸಾಮ್ರಾಜ್ಯಕ್ಕೆ ಅಧೀನವಾಗಿದ್ದ ಒಂದು ಪಾಳೆಯ ಪಟ್ಟಿನ ರಾಜಧಾನಿಯಾಗಿತ್ತು. ವಿರುಪಣ್ಣನಾಯಕ ಮತ್ತು ಅವನ ತಮ್ಮ ವೀರಣ್ಣನಾಯಕ-ಇವರ ಆಧಿಪತ್ಯದಲ್ಲಿ ಅದು ವಿಶೇಷ ಅಭಿವೃದ್ಧಿಗೆ ಬಂದಿತು. ಇಲ್ಲಿನ ಒಂದು ಸಣ್ಣಗುಡ್ಡದ ಮೇಲೆ 'ಪಾಪನಾಶೇಶ್ವರ' ದೇವಾಲಯವಿದೆ. ಇದು ಅಚ್ಯುತ ದೇವರಾಯನ ಕಾಲದಲ್ಲಿ ವಿರುಪಣ್ಣನಾಯಕನಿಂದ ನಿರ್ಮಿತವಾಯಿತು. ಇದರ ರಂಗ ಮಂಟಪ, ಮೊದಲಾದೆಡೆಗಳಲ್ಲಿ ಅನೇಕ ಚಿತ್ರಗಳಿವೆ. ವೀರಭದ್ರದೇವರ ಗುಡಿ, ರಂಗನಾಥ ದೇವಾಲಯದ ಮೇಲ್ಛಾವಣಿಯಲ್ಲಿಯೂ ಚಿತ್ರಗಳಿವೆ.

ಪಾಪನಾಶೇಶ್ವರ ದೇವಾಲಯದ ಮಂಟಪದಲ್ಲಿ ರಾಮಾಯಣ, ಮಹಾಭಾರತ ಮತ್ತು ಅನೇಕ ಪುರಾಣಗಳ ಸನ್ನಿವೇಶಗಳ ಚಿತ್ರಗಳು ಬಹು ಆಕರ್ಷಕವಾಗಿವೆ. ಅವುಗಳಲ್ಲಿ ಗಿರಿಜಾಕಲ್ಯಾಣ, ದಕ್ಷಿಣಾಮೂರ್ತಿ, ರಾಮಪಟ್ಟಾಭಿಷೇಕ, ವಟಪತ್ರಶಾಯಿ ಕೃಷ್ಣ, ಕಿರಾತಾರ್ಜುನೀಯ ಮೊದಲಾದುವು ಕೌಶಲ್ಯಪೂರ್ಣವಾಗಿವೆ. ದೇವಾಲಯದ ಅರ್ಧಮಂಟಪದಲ್ಲಿ ಲಿಂಗೋದ್ಭವ ಶಿವ, ಯೋಗಿರಾಜ ಶಿವ, ಚಂಡಿಕೇಶಾನುಗ್ರಹಮೂರ್ತಿ, ಭಿಕ್ಷಾಟನ ಶಿವ, ಹರಿಹರ ಮೂರ್ತಿ, ಪಾರ್ವತೀ ಕಲ್ಯಾಣ, ತ್ರಿಪುರಾಂತಕ, ನಟೇಶ, ಚಂದ್ರಶೇಖರ, ಗೌರೀಪ್ರಸಾದಕ ಶಿವ ಮೊದಲಾದುವುಗಳ ಚಿತ್ರಸಾಲು ಬಹಳ ಮನ ಮೋಹಕವಾಗಿವೆ.

**ಡಾ॥ ಎನ್. ಅನಂತರಂಗಾಚಾರ್**

ವಿಜಯನಗರದ ಅವನತಿಯ ಕಾಲದಲ್ಲಿ ರಚಿತವಾದುವು ಕುಂಭಕೋಣ, ತಂಜಾವೂರು ದೇವಾಲಯಗಳ ಚಿತ್ರಗಳು, ಸೋಮಪಾಳ್ಯದ ವಿಷ್ಣುದೇವಾಲಯದ ಚಿತ್ರಗಳೂ ಎಡೆಯೂರಿನ ತೋಂಟದ ಸಿದ್ಧಲಿಂಗೇಶ್ವರದ ದೇವಾಲಯದ ಚಿತ್ರಗಳೂ ವಿಜಯನಗರದ ಕಾಲದ ಚಿತ್ರಕಲೆಗೆ ಪ್ರಮುಖ ಕಾಣಿಕೆಯನ್ನು ಕೊಟ್ಟಿವೆ. ಸಿದ್ಧಲಿಂಗೇಶ್ವರ ದೇವಾಲಯದ ಮೇಲ್ಛಾವಣಿಗಳಲ್ಲಿ ಶಿವಯೋಗಿಯ ಜೀವನದ ಕೆಲವು ಸನ್ನಿವೇಶಗಳೂ ಶಿವನ ಪಂಚವಿಂಶತಿ ಲೀಲೆಗಳೂ ರಚಿತವಾಗಿವೆ. ಅವುಗಳಿಗೆ ಕನ್ನಡದಲ್ಲಿ ವಿವರಣೆಯನ್ನೂ ಕೊಡಲಾಗಿದೆ.

ತಂಜಾವೂರಿನ ಬೃಹದೇಶ್ವರ ದೇವಾಲಯದ ಚಿತ್ರಗಳು ವಿಜಯನಗರದ ಇಳಿಗಾಲದಲ್ಲಿ ಸುಮಾರು ಎರಡನೆಯ ವೆಂಕಟನ ಕಾಲದಲ್ಲಿ ರಚಿತವಾಗಿದ್ದರೂ ವೈವಿಧ್ಯಪೂರ್ಣವೂ ವ್ಯಾಪಕವಾದುವೂ ಆಗಿವೆ. ಇಲ್ಲಿ ತಂಜಾವೂರಿನ ಸ್ಥಳಪುರಾಣಕ್ಕೆ ಸಂಬಂಧಪಟ್ಟವೂ ಶೈವ ಸಂತರ ಜೀವನವನ್ನೂ ಕುರಿತವೂ, ಹಿಂದೂ ಪುರಾಣಗಳ ಸನ್ನಿವೇಶವನ್ನೂ ತಿಳಿಸತಕ್ಕವೂ, ಹಿಂದೂ ದೇವತೆಗಳ ವಿವಿಧ ಆಕಾರ ಅವತಾರಗಳನ್ನೂ ಚಿತ್ರಿಸತಕ್ಕವೂ, ಸಾಮಾನ್ಯ ಜನಜೀವನ, ಬೇಟೆ, ತಪಸ್ಸು ಮೊದಲಾದುವುಗಳಿಗೆ ಸಂಬಂಧಪಟ್ಟವೂ ಆದವುಗಳು ಸಮಾವೇಶ

ಗೊಂಡಿವೆ. ಇಲ್ಲಿನ ಚಿತ್ರಗಳು ಹಿಂದಿನ ಅಜಂತ ಅಥವಾ ವಿಜಯನಗರದ ಕಾಲಗಳ ಕಲಾಮಟ್ಟಕ್ಕೇರಲಾರವು. ಆದರೂ ೧೭ನೆಯ ಶತಮಾನದ ಚಿತ್ರ ಪ್ರಪಂಚದ ಪ್ರತಿನಿಧಿಯಾಗಿ ಆಕಾಲದ ಚಿತ್ರಕಲೆಯ ತಂತ್ರವನ್ನೂ ಚಿತ್ರ ಪದ್ಧತಿಯನ್ನೂ ತಿಳಿಸಲು ಸಹಾಯವಾಗಿವೆ. ಈ ಚಿತ್ರಗಳೆಲ್ಲಾ ಸಾಮಾನ್ಯವಾಗಿ ಒಣಗಿದ ಗಾರೆಯ ಮೇಲೆ ರಚಿಸಿದುವು. ಸುಣ್ಣದ ತಿಳಿಯಲ್ಲಿ ಬಣ್ಣವನ್ನು ಬೆರಸಿ ಒಣಗಿದ ಗಾರೆಯ ಮೇಲೆ ಚಿತ್ರಿಸುವ ಕ್ರಮ ಇಲ್ಲಿಯದು.

ವಿಜಯನಗರದ ಕಾಲದಲ್ಲಿ ಭಾರತಕ್ಕೆ ಪೇಯ್ಸ್ ಎಂಬ ಪ್ರವಾಸಿಯು ವಿಜಯನಗರದಲ್ಲಿದ್ದ ಖಾಸಗಿ ಮನೆಗಳು, ಅರಮನೆಗಳು ನೊದಲಾದುವುಗಳು ವಿವಿಧ ವರ್ಣಾಲಂಕಾರಗಳಿಂದ ಅಲಂಕೃತವಾಗುತ್ತಿದ್ದುವೆಂದು ಹೇಳಿದ್ದಾನೆ. ಇತ್ತೀಚೆಗೆ ಸಿಕ್ಕಿರುವ ಅನೇಕ ಖಾಸಗಿ ಮನೆಗಳ ಅವಶೇಷಗಳಿಂದ ಅವನು ಹೇಳಿದ ಮಾತು ಸತ್ಯವೆಂದು ಖಚಿತವಾಗಿದೆ. ಬಹುಕಾಲದಿಂದ ಕರ್ಣಾಟಕದ ಪ್ರತಿಷ್ಠಿತರಾದ ಐಶ್ವರ್ಯವಂತರೂ, ಪಾಳೆಯಗಾರರೂ ನವಾಬರೂ ತಮ್ಮ ನಿವಾಸಗಳನ್ನೂ ಭಿತ್ತಿ ಚಿತ್ರಗಳಿಂದ ಅಲಂಕರಿಸಿಕೊಳ್ಳುವುದು ಸಾಮಾನ್ಯವಾದ ರೂಢಿ. ಪಾಳೆಯಗಾರರೂ ನವಾಬರೂ ಸುಲ್ತಾನರೂ ತಮ್ಮ ಪರಿವಾರವನ್ನೂ ಭೇಟಿ ಮಾಡುವ ಓಲಗಶಾಲೆಯನ್ನೂ ವಿವಿಧ ರೀತಿಯ ಭಿತ್ತಿ ಚಿತ್ರಗಳಿಂದ ಅಲಂಕರಿಸಿಕೊಳ್ಳುತ್ತಿದ್ದರು. ಆಢ್ಯರೂ ಗಣ್ಯರೂ ಆದವರು ಕಲಾನಿವಾಸಿಗಳೂ ಶೃಂಗಾರಪ್ರಿಯರೂ ಆಗಿದ್ದರೆ, ತಮ್ಮ ಶಯ್ಯಾಗಾರವನ್ನು ಸೂಕ್ತ ರೀತಿಯಲ್ಲಿ ಸಿಂಗರಿಸಿಕೊಳ್ಳುತ್ತಿದ್ದುದೂ ಉಂಟು. ಇಂತಹವುಗಳಲ್ಲನೇಕವು ಮರದ ಕಟ್ಟಡಗಳಾಗಿದ್ದುದರಿಂದಲೂ, ಸೂಕ್ತ ರೀತಿಯಲ್ಲಿ ರಚಿತವಾಗಿಲ್ಲದುದರಿಂದಲೂ, ಮುಂದಿನ ನಿವಾಸಿಗಳು ಅದನ್ನು ದುರಸ್ತು ಮಾಡುವುದಕ್ಕೆ ಗಮನಕೊಡದಿರುವುದರಿಂದಲೂ ಅವುಗಳಲ್ಲಿ ಬಹುಭಾಗ ನಾಶವಾಗಿವೆ. ಉಳಿದವುಗಳೂ ತಮ್ಮ ಪೂರ್ವ ಶೋಭೆಯನ್ನು ಕಳೆದುಕೊಂಡು ಅವಶೇಷಗಳಾಗಿ ಉಳಿದಿವೆ. ಈಚೆಗೆ ಡಾ॥ ಶಿವರಾಮಕಾರಂತರು ಉತ್ತರ ಕರ್ಣಾಟಕದ ಅಥಣಿ, ನಿಪ್ಪಾಣಿ ವಾಡೆ ನರಗುಂದ ಮೊದಲಾದೆಡೆಗಳಲ್ಲಿ ಸಂಚರಿಸಿ ಅಲ್ಲಿಯ ಚಿತ್ರಗಳನ್ನು ಕೂಲಂಕಷವಾಗಿ ಪ್ರತ್ಯಕ್ಷ ಪರಿಶೀಲಿಸಿ ತಮ್ಮ ಕರ್ಣಾಟಕದ ಚಿತ್ರಕಲೆ ಎಂಬ ಪುಸ್ತಕದಲ್ಲಿ ವಿವರಿಸಿದ್ದಾರೆ. ನಿಪ್ಪಾಣಿ ವಾಡಿಯ ನಿವಾಸಗೃಹ ಮತ್ತು ನರಗುಂದದ ಕೋಟೆಯೊಳಗಣ ಅರಮನೆ ಮೊದಲಾದುವು ತಮ್ಮ ಓಲಗಶಾಲೆ, ಶಯ್ಯಾಗೃಹ ಮೊದಲಾದುವುಗಳ ಭಿತ್ತಿ ಚಿತ್ರಗಳಿಂದ ಪ್ರತ್ಯೇಕ ಚಿತ್ರಶಾಲೆಯಾಗಿವೆ. ಅವುಗಳಲ್ಲಿ ಅನೇಕ ಚಿಕಣಿ ಚಿತ್ರಗಳೂ ಪೌರಾಣಿಕ ದೃಶ್ಯಗಳೂ ಶಿವ ವೈಷ್ಣವ ಲೀಲಾ ಪ್ರಸಂಗಗಳೂ ಯಜ್ಞಯಾಗಾದಿಗಳ ವಿವರಣೆಗಳೂ ಬಹು ಖಚಿತವಾದ ವರ್ಣಗಳಿಂದ ಚಿತ್ರಿತವಾಗಿವೆ. ಇಂತಹವುಗಳು ಕರ್ಣಾಟಕದ ಬಹು ಭಾಗಗಳಲ್ಲಿ ಅಜ್ಞಾತವಾಗಿ ಉಳಿದುಕೊಂಡಿದೆಯೇ ಹೇಳಲಸಾಧ್ಯ. ಕನ್ನಡ ಚಿತ್ರಾಭಿಮಾನಿಗಳು ಅವುಗಳನ್ನು ಆಸಕ್ತಿಯಿಂದ ಹುಡುಕಿ ಕಂಡು ಹಿಡಿದು ಪಟ್ಟಿಮಾಡಬೇಕು. ಸರ್ಕಾರದವರು ಅದನ್ನು ರಾಸಾಯನಿಕ ಪ್ರಯೋಗಗಳಿಂದ ಶುದ್ಧೀಕರಿಸಿ ಪ್ರತಿಕೃತಿಗಳನ್ನು ತಯಾರಿಸಿ ಮೂಲ ಕೃತಿಗಳು ನಾಶವಾಗದಂತೆ ಸಂರಕ್ಷಿಸುವ ಹೊಣೆಗಾರಿಕೆಯನ್ನು ವಹಿಸಬೇಕು. ಮೇಲೆ ಹೇಳಿದ ಖಾಸಗಿ ಚಿತ್ರಗಳೆಲ್ಲ ಕಳೆದ ಒಂದೆರಡು ಶತಮಾನಗಳ ಕಾಲಾವಧಿಗೆ ಸೇರಿದುವು. ಅವುಗಳ ಅಭ್ಯಾಸ ಆಧುನಿಕ ಚಿತ್ರಕಲೆಯ ವ್ಯಾಸಂಗಕ್ಕೆ ಸೂಕ್ತ ಅಸ್ತಿಭಾರವಾಗುತ್ತದೆ.

# ಕನ್ನಡ ಸಾಹಿತ್ಯದಲ್ಲಿ ಧರ್ಮದ ಪಾತಳಿಗಳು

ಸುಮಾರು ಒಂದು ಸಾವಿರ ವರ್ಷಕ್ಕೂ ಮಿಕ್ಕಿ ಇತಿಹಾಸವಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾಲ–ಕಾಲಕ್ಕಾದ ಧರ್ಮದ ಪ್ರಭಾವ-ಪ್ರೇರಣೆ-ನಿಯಂತ್ರಣವನ್ನು ವಿವಿಧ ಪಾತಳಿಗಳ ಮೂಲಕ ಗುರುತಿಸಬಹುದಾಗಿದೆ- ಸಾಹಿತ್ಯ ಚರಿತ್ರೆಯ ಅಧ್ಯಯನವೆಂದರೆ ಕೇವಲ ಭೂತಕಾಲದ ಬಿಡಿ ಘಟನೆಯೊಂದರ ದಾಖಲಲ್ಲ. ಅದು ಒಂದರ ಕಾರಣದಿಂದ ಮತ್ತೊಂದು ಪಡೆದ ಅನಿವಾರ್ಯ ಬೆಳವಣಿಗೆಯೂ ಹೌದು. ಇತಿಹಾಸದ ಚಲನೆಯಲ್ಲಿ ಸಾಹಿತ್ಯ ಕೃತಿಯೊಂದರ ವಸ್ತು–ಅದರ ಒಳಸ್ವರೂಪಗಳಲ್ಲಿ ಪ್ರಕಟಗೊಂಡ ಜೀವನ ಕ್ರಮದ ಗತಿಗಳನ್ನು, ಮನಸ್ಸುಗಳ ಆಲೋಚನೆಗಳನ್ನು, ಬದುಕಿನ ಕುರಿತಾದ ಚಿಂತನೆಗಳನ್ನು ಗರ್ಭೀಕರಿಸಿಕೊಂಡ ಬಿಂದು ಪರಂಪರೆಯಾಗಿರುತ್ತದೆ. ಕನ್ನಡ ಸಾಹಿತ್ಯದ ಆಳಕ್ಕೆ ಇಳಿಯದ ರೈಸ್, ಕಿಟೆಲ್‌ರಂತಹ ಪಾಶ್ಚಾತ್ಯ ವಿದ್ವಾಂಸರಿಗೆ ಇದು ಬರೀ ಮತಪರ ಸಾಹಿತ್ಯವಾಗಿ ಕಾಣಿಸಿತು. ವಸಾಹತುಶಾಹಿ ಶಿಸ್ತಿನಿಂದ ಮೂಡಿಬಂದ ವಿದ್ವಾಂಸರಿಗೂ ಸಾಹಿತ್ಯ ಕೃತಿಯೊಂದರ 'ಒಳಗಿನದ'ಕ್ಕಿಂತ ಕಾಲ, ದೇಶ, ಮತ ಸಂಬಂಧವಾದ ಬಾಹ್ಯವಿಚಾರಗಳೇ ಪ್ರಧಾನವಾಯಿತು. ಕೃತಿಯೊಂದರ ಆಂತರಿಕ ಸ್ವರೂಪದ ಮೇಲೆ ಬೀರಿದ ಸಾಮಾಜಿಕ ಸಾಂಸ್ಕೃತಿಕ ಸಂದರ್ಭಗಳ ಹಿನ್ನೆಲೆಯಲ್ಲಿ ಸಾಹಿತ್ಯ ಕೃತಿಯೊಂದು ಪಡೆಯುವ ಅರ್ಥ ಬೇರೆಯಾಗಿರುತ್ತದೆ.

ಮತ–ಧರ್ಮದಂತಹ ವಿಷಯಕ್ಕೆ ಪ್ರಮುಖವಾಗಿ ತೆರೆದುಕೊಂಡ ಪ್ರಾಚೀನ ಕವಿ ರಾಜಭಕ್ತಿ ಮತ್ತು ಧರ್ಮ ಶ್ರದ್ಧೆಗಳ ಜೊತೆಗೆ ಕಾವ್ಯಶ್ರದ್ಧೆಯನ್ನು ದುಡಿಸಿಕೊಂಡ ಅಂಶ ಗಮನಾರ್ಹವಾಗಿ ಕಾಣುತ್ತದೆ. ಶಿವೇತರಕ್ಷತಿ (ಅಮಂಗಳ ನಿವಾರಣೆ) ಗುಣವನ್ನು ಪಡೆದ ಸಾಹಿತ್ಯದ ಬಗ್ಗೆ ಕವಿರಾಜಮಾರ್ಗಕಾರನು "ಇದು ಪಾಪ, ಇದು ಪುಣ್ಯ, ಇದು ಹಿತ, ಇದು ಅಹಿತ" ಎಂದು ಪಟ್ಟಿ ಮಾಡುತ್ತಾ ಧರ್ಮ, ಅರ್ಥ, ಕಾಮ, ಮೋಕ್ಷಗಳು ಸಾಹಿತ್ಯ ಸೃಷ್ಟಿಯಿಂದ ಲಭಿಸುತ್ತದೆ ಎಂದು ಭಾವಿಸಿದ್ದನು. ಶಬ್ದಮಣಿ ದರ್ಪಣದಂತಹ ವ್ಯಾಕರಣವನ್ನು ಬರೆದ ಕೇಶಿರಾಜ ಕೂಡಾ ತನ್ನ ಕೃತಿಯಿಂದ "ಆಕಾಂಕ್ಷಿತ ಮುಕ್ತಿಯುಕ್ಕುಂ" ಎನ್ನುತ್ತಾನೆ ಇಂದಿಗೂ ಪ್ರಕ್ರಿಯೆಗೊಳ್ಳುತ್ತಿರುವ ಕನ್ನಡದ ಗಟ್ಟಿ ಕವಿಯಾದ ಪಂಪ ತನ್ನ ಭಾರತದಲ್ಲಿ ರಾಜಭಕ್ತಿಯನ್ನು ಮೆರೆದರೆ, ಆದಿಪುರಾಣದಲ್ಲಿ ಧರ್ಮ ಶ್ರದ್ಧೆಯಿಂದ ಕಾವ್ಯಕ್ಕೆ ಕುಂದು ಬಾರದಂತೆ ಎಚ್ಚರವಹಿಸುತ್ತಾನೆ.

ಇದುವೆ ಸುಕವಿ ಪ್ರಮೋದ ಪ್ರದಮ್
ಇದುವೆ ಸಮಸ್ತ ಭವ್ಯಲೋಕ
ಪ್ರಮುದ ಪ್ರದಮ್

ಶ್ರೀ ಪಿ. ಎನ್. ಮಯ್ಯ

...ನೆಗಳ್ದ ಆದಿಪುರಾಣದೊಳಿರ್ಪುದು ಕಾವ್ಯ
ಧರ್ಮಮುಮಂ ಧರ್ಮಮುಮಂ ॥

ಸುಕವಿ ಪ್ರಮೋದವಾದ ಈ ಕೃತಿ ರಚನೆಯ ಹಿನ್ನೆಲೆಯಲ್ಲಿ ಪಂಪನಿಗೆ ತಾನು ಬರೆಯ ಹೊರಟಿರುವುದು ಕಾವ್ಯ ಎಂಬ ಅರಿವು ಜೊತೆಗೆ ಕಾವ್ಯದ ವಸ್ತು ಧರ್ಮವಾಗಿದ್ದರೂ ಆ ಧರ್ಮವನ್ನು ಕವಿತ್ವದ ನೆಲೆಯೊಂದಿಗೆ ಅರಿಯಬೇಕೆಂಬ ಕಾಳಜಿ ಇಲ್ಲಿ ಮುಖ್ಯವಾಗುತ್ತದೆ. ಈ ಎಚ್ಚರವನ್ನು ಉದ್ದಕ್ಕೂ ಪಾಲಿಸಿರುವುದರಿಂದಲೇ ಆದಿಪುರಾಣ ಅಂತಿಮವಾಗಿ ಕೇವಲ ಪುರಾಣವಾಗದೆ ಕಾವ್ಯದ ನೆಲೆಯನ್ನು ಮುಟ್ಟಿದೆ. ಈ ದೃಷ್ಟಿಯಿಂದಲೇ ಪಂಪನನ್ನು ಜೈನ ಧರ್ಮದ ಮತಪ್ರಚಾರಕನಲ್ಲ, ವಿಮರ್ಶಕ ಎಂದು ಕರೆದಿರುವುದು. ಹತ್ತನೇ ಶತಮಾನದ ಕನ್ನಡ ಸಾಹಿತ್ಯವಂತೂ ಪಂಪನ ದಟ್ಟ ನೆರಳಿನಿಂದಲೆ ತುಂಬಿಕೊಂಡಿದೆ. ಪಂಪ ಹಾಕಿಕೊಟ್ಟ ಲೌಕಿಕ–ಆಗಮಿಕ ಎಂಬ ಕಾವ್ಯ ಮಾರ್ಗ ಒಂದು ಪರಂಪರೆಯನ್ನೇ ನಿರ್ಮಿಸಿತು.

ಕಾವ್ಯವನ್ನು ಸ್ವೀಕರಿಸುವ ಜನರು ಧರ್ಮಭೀರುಗಳಾಗಿರುವುದರಿಂದ ಕನ್ನಡ ಸಾಹಿತ್ಯ ಚರಿತ್ರೆಯು ಉದ್ದಕ್ಕೂ ಧರ್ಮನಿಷ್ಠ ಕೃತಿಗಳಿಗೆ ಸಿಕ್ಕಿದಷ್ಟು ಪ್ರಚಾರ ಬೇರೆ ಕೃತಿಗಳಿಗೆ ದೊರೆತಿಲ್ಲ. ಆ ದೃಷ್ಟಿಯಿಂದಲೇ ಒಂದು ಕೃತಿಯ ಸಹಸ್ರಾರು ಪ್ರತಿಗಳನ್ನು ಶಾಸ್ತ್ರದಾನದ ಉದ್ದೇಶದಿಂದ ಪ್ರತಿಮಾಡಿ ಹಂಚಿದ ಉಲ್ಲೇಖ ಸಿಗುತ್ತದೆ. ಆದರೆ ವಿಶಿಷ್ಟ ಕಾವ್ಯದ ಬನಿವುಳ್ಳ ಪಂಪಭಾರತದ 3 ಹಸ್ತ ಪ್ರತಿಗಳು, ರನ್ನನ ಗದಾಯುದ್ಧದ 1½ ಹಸ್ತ ಪ್ರತಿಗಳು ನಮಗೆ ದೊರೆಯುತ್ತವೆ. ಇದಕ್ಕೆ ಪ್ರಮುಖ ಕಾರಣ ಆ ಕಾಲದ ಬದುಕೇ ಧರ್ಮನಿಷ್ಠವಾದದ್ದು ಎನ್ನಬಹುದು. ಧರ್ಮದ ನಿಯಂತ್ರಣದಿಂದ ಕಾವ್ಯಧರ್ಮ ಕುಂಠಿತವಾಯಿತು ಎಂಬ ಮಾತೊಂದಿದೆ. ಆದರೆ ಈ ಮಾತು ಪೂರ್ತಿ ಸತ್ಯ ಅಲ್ಲ. ಭಾರತದ ಹೆಚ್ಚಿನ ಕವಿಗಳಿಗೆ ವಸ್ತು ಲಭ್ಯವಾಗುವುದು ಈಗ ರಾಷ್ಟ್ರೀಯ ಕಾವ್ಯಗಳೆಂದು ಕರೆಸಿಕೊಂಡಿರುವ ರಾಮಾಯಣ, ಮಹಾಭಾರತದಿಂದ. (ಅದರಲ್ಲೂ ಜೈನ–ಬೌದ್ಧ–ವೈದಿಕ ರಾಮಾಯಣಗಳೆಂಬ ಪರಂಪರೆ, ಔತ್ತರೇಯ–ದಾಕ್ಷಿಣಾತ್ಯ ಎಂಬ ಪಾಠಭೇದ ಮುಂತಾದ ವ್ಯತ್ಯಯವಿರುತ್ತಿತ್ತು) ಪ್ರಾಚೀನ ಕನ್ನಡ ಕವಿಗಳಿಗಂತೂ ವಸ್ತು ಎಲ್ಲಿಂದಲೂ ಬರಬಹುದು. ಆದರೆ ಆ ವಸ್ತುವನ್ನು ಕವಿಯೊಬ್ಬ ಹೇಗೆ ನಿರ್ವಹಿಸಿದ್ದಾನೆ ಎನ್ನುವುದು ಮುಖ್ಯವಾಗುತ್ತಿತ್ತು. ಕವಿ ಒಬ್ಬ ಧರ್ಮದ ಬಗ್ಗೆ ತನಗಿರುವ ಎಲ್ಲಾ ಬಗೆಯ ಭಾವುಕ ಸಂಬಂಧವನ್ನು ಮೀರಿ ಕಾವ್ಯರಚನೆಗೆ ತೊಡಗಬೇಕಾಗಿತ್ತು.

ಜಿ. ಎಸ್. ಶಿವರುದ್ರಪ್ಪನವರು ಹೇಳುವಂತೆ ಧರ್ಮದಿಂದ ಪ್ರೇರಣೆಗೊಂಡ ಸಾಹಿತ್ಯವನ್ನು ಸ್ಥೂಲವಾಗಿ ಮೂರು ಭಾಗಗಳಾಗಿ ವಿಂಗಡಿಸಬಹುದು. 1. ಧಾರ್ಮಿಕ ಸಾಹಿತ್ಯ. 2. ಭಕ್ತಿ ಸಾಹಿತ್ಯ. 3. ಅನುಭಾವ ಸಾಹಿತ್ಯ. ಈ ಮೂರು ಬಗೆಯ ಕೃತಿಗಳನ್ನು ಜೈನ–ವೀರಶೈವ ವೈಷ್ಣವ ಕವಿಗಳಲ್ಲಿ ಕಾಣಬಹುದು.

ಹನ್ನೆರಡನೇ ಶತಮಾನದ ವಚನ ಚಳುವಳಿಯಲ್ಲಿ ಕಾವ್ಯ ಬೇರೆ ಅಲ್ಲ, ಧರ್ಮ ಬೇರೆ ಅಲ್ಲ ಎಂಬ ದೃಷ್ಟಿ ಬೆಳೆಯಿತು. ಧರ್ಮ ಶ್ರದ್ಧೆಯ ಜೊತೆಗೆ ವೈಯಕ್ತಿಕ ಸಾಧನೆಯನ್ನು ಮಾಡಿ ತೋರಿಸಿದ ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ, ಸಿದ್ಧರಾಮ, ಕವಿ ವ್ಯಕ್ತಿತ್ವದ ಜೊತೆಗೆ ಸಾಧಕರೂ ಆದರು. "ಲೋಕದ ಡೊಂಕ ನೀವೇಕೆ ತಿದ್ದುವಿರಿ?" ಎಂದು ಪ್ರಶ್ನಿಸುತ್ತಾ, ಕಾಯಕವೇ ಕೈಲಾಸ ಎಂದು ಸಾರುತ್ತಾ ಬಸವಣ್ಣ ಪರಿಶುದ್ಧ ವ್ಯಕ್ತಿತ್ವದ ಬಗ್ಗೆ ಕಾಳಜಿ ವಹಿಸಿದರು. ಪ್ರಾಣಿರೂಪಕಗಳ ಮೂಲಕ ಪಶು–ಪಶುಪತಿ (ಶಿವ) ಯ ಸಂಬಂಧಗಳನ್ನು ವಿಶ್ಲೇಷಿಸುತ್ತಾರೆ. ಅಕ್ಕನ ವಚನಗಳು ಕೂಡಾ ಹೆಣ್ಣೊಂದರ ಅಂತರ್ಮುಖ ಆಧ್ಯಾತ್ಮಿಕ ನೆಲೆಗಳನ್ನು ಹೇಳುವುದರೊಂದಿಗೆ, ಲೌಕಿಕದ ಕ್ಷಣಿಕ–ಅರ್ಥ ಹೀನ ಬದುಕನ್ನು ನಿರಾಕರಿಸುವ ಮೂಲಕ ದೈಹಿಕತೆಗಿಂತ– ದೈವಿಕತೆಯತ್ತ ವ್ಯಕ್ತವಾಗುವ ಪ್ರೇಮದ ತಾಜಾತನವನ್ನು ತೋರಿಸುವಂತಹದು. ಹರಿಹರನು ಭಕ್ತಕವಿ. ಹರಿಹರ–ರಾಘವಾಂಕರ ನಡುವೆ ಹರಿಶ್ಚಂದ್ರ ಕಾವ್ಯದ ಬಗ್ಗೆ ಎದ್ದ ವಿವಾದ, ಮಾವನ ಒತ್ತಡಕ್ಕೆ ಮಣಿದು ಶೈವ ಪಂಚಕಗಳನ್ನು ಬರೆದ ಸೋದರಳಿಯನ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಸ್ಥಿತಿಯಿಂದ ಒಂದು ಅಂಶ ವ್ಯಕ್ತವಾಗುತ್ತದೆ. ಎಂತಹ ಸ್ವತಂತ್ರ ಮನೋಧರ್ಮದ ಕವಿಯೂ ತನ್ನ ಕಾವ್ಯ ಶ್ರದ್ಧೆಯ ತೆಕ್ಕೆಯಲ್ಲಿ ಧರ್ಮ ಶ್ರದ್ಧೆಯನ್ನು ಅಳವಡಿಸಿಕೊಳ್ಳಬೇಕಾಯಿತು ಎಂದು ತಿಳಿಯುತ್ತದೆ.

ಅನುಭಾವದ ಕುರಿತಾದ ಸಾಹಿತ್ಯವೇ ಅನುಭಾವ ಸಾಹಿತ್ಯ. ಅಲ್ಲಮನ ಬೆಡಗಿನ ವಚನಗಳನ್ನು ಈ ಗುಂಪಿಗೆ ಸೇರಿಸಬಹುದು. ಅನುಭಾವ ಎನ್ನುವುದು ಒಂದು ವಿಶೇಷ ಮಾನಸಿಕ ನಿಲುವು. ಕುಮಾರವ್ಯಾಸ ನಂತಹ ಮಹಾಕವಿಯ ಪಾಲಿಗೆ ಕೌರವ–ಪಾಂಡವರ ಯಾದವೀಕಲಹದ ಕಥೆ ಕೂಡಾ ಕೃಷ್ಣ ಕತೆಯಾಗಿ ಪರಿಣಮಿಸುತ್ತದೆ. ಯುದ್ಧದ ಅನಿವಾರ್ಯತೆ ಮತ್ತು ರಾಜಕೀಯ ಸಂಧಾನಗಳ ಅಸ್ಥಿರತೆಯನ್ನು ಉದ್ಯೋಗ ಪರ್ವದಲ್ಲಿ ವಿವರಿಸುವುದರ ಜೊತೆಗೆ ಕೃಷ್ಣದೇವರಾಯ ಪೂರ್ವದ ವಿಜಯನಗರ ಚರಿತ್ರೆಯನ್ನು ದಾಖಲಿಸುವುದು ಮುಖ್ಯವಾಗಿರುತ್ತದೆ. ಭಕ್ತಿ ಪಂಥದ ಹರಿದಾಸರು ಕೂಡಾ ಲೌಕಿಕದ ಕ್ಷಣಭಂಗುರತೆಯನ್ನು ಹೇಳುವುದರ ಜೊತೆಗೆ ದೇವರ ಅಸ್ತಿತ್ವದ ಸಾರ್ವತ್ರಿಕತೆಯನ್ನು ಕೀರ್ತನೆಗಳ ಮೂಲಕ ಹೇಳುತ್ತಾ ಹೋದರು. ಒಟ್ಟಿನಲ್ಲಿ ಧರ್ಮವೆಂಬುದು ಕವಿಗಳನ್ನು ನಿಯಂತ್ರಣದಲ್ಲಿಡುವ ಕೆಲಸ ಮಾಡಿದೆ. ಜೈನ–ವೈಷ್ಣವ–ವೀರಶೈವ ಧರ್ಮದ ವಿವಿಧ ಪಾತಳಿಗಳು ಆಯಾ ಕಾಲದ ಸಾಹಿತ್ಯದೊಡನೆ ಕೆಲವೊಮ್ಮೆ ನೇರವಾಗಿ, ಕೆಲವೊಮ್ಮೆ ಗುಪ್ತಗಾಮಿನಿಯಾಗಿ, ಕೆಲವೊಮ್ಮೆ ನಿಯಂತ್ರಕ ಶಕ್ತಿಯಾಗಿ ಕೆಲಸ ಮಾಡಿವೆ. ಒಂದು ಧರ್ಮ ತನ್ನ ವೈಭವದ ಪೊರೆ ಕಳಚಿಕೊಂಡು ಹೀನಾಯ ಸ್ಥಿತಿಯಲ್ಲಿರುವಾಗ, ತನ್ನ ಈ ಸ್ಥಿತಿಗೆ ಕಾರಣವಾದ ಅನ್ಯಮತ ವಿಡಂಬನೆಯನ್ನು ಬಂಡವಾಳವಾಗಿಟ್ಟುಕೊಂಡು ನಯಸೇನ ಧರ್ಮಾಮೃತ ರಚಿಸಿದ, ಬ್ರಹಶಿವ ಸಮಯಪರೀಕ್ಷೆ ರಚಿಸಿದ. ಇಂತಹ ಕಾವ್ಯಗಳು ಕೇವಲ ಮತೀಯ ಎನಿಸಿಬಿಟ್ಟವು. ಆದರೆ ನಿಜವಾದ ಕಾವ್ಯವೊಂದು ತನ್ನ ಎಲ್ಲಾ ನಿಯಂತ್ರಣಗಳನ್ನು ಒಳಗೊಂಡೂ ಕಾಲದೇಶಗಳನ್ನು ಮೀರಿ ನಿಲ್ಲುವ ಕೃತಿಯಾಗಬೇಕು. ಕನ್ನಡ ಸಾಹಿತ್ಯದಲ್ಲಿ ಪಂಪ, ಕುಮಾರವ್ಯಾಸ, ರಾಘವಾಂಕ, ಲಕ್ಷ್ಮೀಶ ರಂತಹ ಕೆಲವು ಕವಿಗಳನ್ನಾದರೂ ಈ ಸಂದರ್ಭದಲ್ಲಿ ಹೆಸರಿಸಬೇಕು. ಆದುದರಿಂದ ಧರ್ಮ ಶ್ರದ್ಧೆ ಎನ್ನುವುದು ಕಾವ್ಯ ನಿರ್ಮಿತಿಯ ಅನಿವಾರ್ಯ ಅಂಗ ಎಂದು ಪರಿಗಣಿಸಿದ್ದರೂ ಅದರ ಸೆಳೆತದಿಂದ ತಪ್ಪಿಸಿಕೊಂಡ ಕವಿಗಳ ಸಂಖ್ಯೆ ಕಡಿಮೆ ಎಂಬುದು ವಾಸ್ತವ ಸಂಗತಿಯಾಗಿದೆ.

———

ಗೃಹಲಕ್ಷ್ಮಿ

# ರಾಣಿ ಮದಾಲಸೆ

ರಾಜನೀತಿ ಶಾಸ್ತ್ರವನ್ನು ಕಲಿತು ಇಂದು ಅನೇಕರು ಪಾರಂಗತೆಯರಾಗಿದ್ದಾರೆ. ಆದರೆ ಬಹಳಷ್ಟು ಹಿಂದೆಯೇ ವಿದುಷಿಯೊಬ್ಬಳು ರಾಜನೀತಿ ಶಾಸ್ತ್ರದಲ್ಲಿ ಪ್ರವೀಣೆಯಾಗಿದ್ದು ಗೋಚರಿಸುತ್ತದೆ. ಆಕೆಯೇ ರಾಣಿ ಮದಾಲಸೆ. ಮದಾಲಸೆಯ ಉಲ್ಲೇಖ 'ಮಾರ್ಕಂಡೇಯ ಪುರಾಣ'ದಲ್ಲಿ ಆಗಿದೆ. ಆಕೆ ಮಹಾಚತುರೆ. ರಾಜನೀತಿ ಶಾಸ್ತ್ರವನ್ನು ಆಕೆ ಅರೆದು ಕುಡಿದಿದ್ದಳೇನೋ ಎಂಬಂತೆ ಇದ್ದಳು. ಪಂಡಿತೆ, ವಿದ್ವಾಂಸೆ, ಸೂಕ್ಷ್ಮ ಜ್ಞಾನವತಿ, ರಾಣಿಯರಿಗೆ ಇರಬೇಕಾದ ಅರ್ಹತೆಗಳಲ್ಲಿ ಎಲ್ಲದರಲ್ಲೂ ಪರಿಣತಳಾಗಿದ್ದವಳು. ಆಕೆಯ ಬುದ್ಧಿವಂತಿಕೆಗೆ ಬೆರಗಾಗಿಯೇ ರಾಜ ಋತಧ್ವಜನು ಆಕೆಯನ್ನು ವಿವಾಹವಾದನೇನೊ!

ಮದಾಲಸೆಯ ವಿವಾಹದ ನಂತರದ ಕತೆಯೂ ಸ್ವಾರಸ್ಯವಾಗಿದೆ. ರಾಜ ಋತುಧ್ವಜ ಕುವಲಯಾಶ್ವನ, ಪತ್ನಿಯಾದ ರಾಣಿ ಮದಾಲಸೆಯು ತನಗೆ ಹುಟ್ಟಿದ ಮೂರು ಮಕ್ಕಳ ನಾಮಕರಣ ಸಂದರ್ಭಗಳಲ್ಲಿಯೂ ತನ್ನ ಗಂಡನು ಮಕ್ಕಳಿಗೆ ಇಟ್ಟ ಹೆಸರುಗಳನ್ನು ಕಂಡು ಹಾಸ್ಯ ಮಾಡುತ್ತಾಳೆ. ಇದರಿಂದ ನೊಂದ ಕುವಲಯಾಶ್ವನು ತನಗೆ ನಾಲ್ಕನೆಯ ಮಗುವಾದಾಗ ಅವನಿಗೆ ಹೆಸರಿಡುವ ಕಾರ್ಯವನ್ನು ರಾಣಿಗೇ ವಹಿಸುತ್ತಾನೆ. 'ರಾಣಿ ನನ್ನನ್ನು ನಾಮಕರಣ ಸಂದರ್ಭದಲ್ಲಿ ಹಿಂದೆ ಹಾಸ್ಯ ಮಾಡಿದ್ದೆಯಲ್ಲ. ಆದುದರಿಂದ ಈ ಮಗುವಿಗೆ ನೀನೇ ಹೆಸರಿಡು' ಎನ್ನುತ್ತಾನೆ. ಮದಾಲಸೆಯು ತನ್ನ ಮುದ್ದು ಕಂದನಿಗೆ "ಅಲರ್ಕ"ನೆಂದು ಹೆಸರಿಡುತ್ತಾಳೆ. ಹಾಗೂ ತಾನು ರಾಜನಿಟ್ಟ ಹೆಸರುಗಳನ್ನು ಕೇಳಿ ಏಕೆ ನಕ್ಕೆನೆಂದೂ ಹೇಳುತ್ತಾಳೆ. ವಿ–ಕ್ರಾಂತ, ಸು–ಬಾಹು, ಶತ್ರುಮರ್ದನ– ಎಂಬ ಹೆಸರುಗಳು ಹೇಗೆ ಆತ್ಮಕ್ಕೆ ವಿರೋಧಿಯಾಗಿ ನಿಲ್ಲುತ್ತವೆ ಎನ್ನುವುದನ್ನು ಸ್ಪಷ್ಟಪಡಿಸುತ್ತಾಳೆ. ಎಲ್ಲರ ದೇಹಗಳಲ್ಲಿಯೂ ಒಂದೇ ಆತ್ಮರೂಪಿಯಾದ ಭಗವಂತನಿರುವಾಗ ಶತ್ರುಗಳು ಹೇಗೆ ಉಂಟಾಗುತ್ತಾರೆ ಹೀಗೆಯೇ ಆತ್ಮಕ್ಕೆ ಸಂಬಂಧಿಸಿದ ವಿಚಾರಗಳಿಂದ ಸು–ಬಾಹು ಹಾಗೂ ವಿ–ಕ್ರಾಂತ ಹೆಸರುಗಳೂ ಅರ್ಥ ಹೀನವಾಗುತ್ತವೆ. ರಾಜನು ಮದಾಲಸೆಯ ನುಡಿಗಳಿಂದ ಸಮಾಧಾನ ಹೊಂದುತ್ತಾನೆ.

'ಮಾರ್ಕಂಡೇಯ ಪುರಾಣದಲ್ಲಿ', ೩೦ ನೇ ಸರ್ಗದಿಂದ ಹಿಡಿದು 38 ನೇ ಸರ್ಗದವರೆಗಿನ ಅನೇಕ ಶ್ಲೋಕಗಳಲ್ಲಿ ಮಹಾರಾಣಿ ಮದಾಲಸೆಯ ವಿಷಯ ಹಬ್ಬಿಕೊಂಡಿದೆ.

ಮಿಕ್ಕವರಿಗಿಂತ ರಾಣಿಗೆ ಚಿಕ್ಕವನಾದ 'ಅಲರ್ಕ'ನಲ್ಲಿ ಬಹಳ ಪ್ರೀತಿಯಿತ್ತಿತು. ಅಲರ್ಕನಿಗೆ ಆಕೆ ರಾಜೋಚಿತವಾದ ಕರ್ತವ್ಯಗಳನ್ನು ತಿಳಿಸಿಕೊಡಬೇಕೆಂದು ರಾಜನ. ಆಜ್ಞೆ ಮಾಡುತ್ತಾನೆ. ರಾಣಿಯು ಅರ್ಥಶಾಸ್ತ್ರದಲ್ಲಿ ಮಹಾ ಪಂಡಿತೆಯಾದುದರಿಂದ ರಾಜಕುಮಾರನಿಗೆ ಉಚಿತವಾದ ಶಿಕ್ಷಣ ನೀಡುತ್ತಾಳೆ. ಅದನ್ನು ಹೀಗೆ ಸಂಗ್ರಹಿಸಿ ಕೊಡಬಹುದು.

"ಶತ್ರುಗಳನ್ನು ನಾಶಮಾಡುವುದು ರಾಜನ" ಪ್ರಾರಂಭಿಕ ಕರ್ತವ್ಯ. ಬ್ರಾಹ್ಮಣರು–ಸಜ್ಜನರೂ ಆಶ್ರಮವಾಸಿಗಳೂ ಆದವರನ್ನು – ಒಡವೆಗಳನ್ನು ಸ್ತ್ರೀಯರು ಜಾಗರೂಕತೆಯಿಂದ ಸಂರಕ್ಷಿಸಿಕೊಳ್ಳುವಂತೆ–ರಕ್ಷಿಸುವುದು ರಾಜನಿಗೆ ಮುಖ್ಯವಾದುದು. ಅಮಾತ್ಯರ ಮತ್ತು ಇತರರ ಸಲಹೆಗಳನ್ನು ಉಚಿತವಾದ ಸಂದರ್ಭಗಲ್ಲಿ ಕೇಳಿ ತೀರ್ಮಾನ ಕೊಡತಕ್ಕದ್ದು. ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯ ಈ ಆರು ವಿಧಗಳಲ್ಲಿ ಸೈನ್ಯವ್ಯವಸ್ಥೆ ತಕ್ಕದಾಗಿದ್ದು ಉಪಯೋಗಕ್ಕೆ ಬರುವಂತೆ ಸಿದ್ಧವಾಗಿಟ್ಟುಕೊಂಡಿರಬೇಕು. ಮಂತ್ರಿಗಳು, ಅಪ್ತರು, ಸೇವಕರು, ಪ್ರಜಾಜನರನ್ನು ರಕ್ಷಿಸಲು ಅಸಮರ್ಥನಾದ ರಾಜನು ತಾನೂ ನಾಶವಾಗಿ ಇತರರನ್ನು ನಾಶಪಡಿಸುತ್ತಾನೆ. ಅರಸನು ಆಸೆ ಮತ್ತು ಕ್ರೋಧವನ್ನು ಜಯಿಸಬೇಕು.

"ಅತಿಮೋಹಕ್ಕೆ ರಾಜನು ಒಳಗಾದರೆ ಅವನ ಮರಣ ನಿಶ್ಚಿತ. ಪಾಂಡು ಮಹಾರಾಜನೂ ಹೀಗೆ ಮೋಹದಿಂದ ಮೃತಿ ಹೊಂದಿದನು. ಮಹಾಯುದ್ಧಗಳೆಲ್ಲಾ ಮೋಹದ ಕಾರಣವೇ ಉಂಟಾಯಿತೆಂದು ಹೇಳಬಹುದು."

"ವೇನನನ್ನು ಮತ್ತಿನಿಂದ ಮೈ ಮರೆಯುವಂತೆ ಮಾಡಿ ಬ್ರಾಹ್ಮಣರು ಕೊಂದಿದ್ದು, ಅನುಹ್ರಾದನು ಕೋಪದಿಂದ ತನ್ನ ಮಗನನ್ನು ಸಂಹರಿಸಿದ್ದು, ಅನಾಯುಸಳ ಮಗನಾದ ಬಲಿಯು ಅಹಂಕಾರದಿಂದ ಪತನ ಹೊಂದಿದ್ದು, ಇಂತಹ ವಿಪರೀತ ಭಾವನೆಗಳ ಸ್ಥಿತಿಗಳನ್ನು ರಾಜರು ಅದಷ್ಟೂ ನಿಗ್ರಹಿಸ ಬೇಕು."

ಮದಾಲಸೆಯು ಮಗನಿಗೆ ಮತ್ತೂ ಹೇಳುತ್ತಾಳೆ ಕಾಗೆ–ದುಂಬಿ–ಹಾವು–ನವಿಲು–ಕೆಂಪು ಮೇಕೆ–ಬಾತುಕೋಳಿ ಚಿರತೆಗಳ ಗಮನವನ್ನು ರಾಜನು ಗಮನಿಸತಕ್ಕದ್ದು. ಇಂದ್ರ–ಸೂರ್ಯ–ಯಮ–ಚಂದ್ರ ವಾಯು– ಈ ಐವರ ಗುಣಾವಳಿಗಳನ್ನರಿತ



ದೊರೆಯು ಅದರಂತೆಯೇ ತಾನೂ ನಡೆದುಕೊಂಡು ಪ್ರಜಾರಂಜಕನಾಗಿರಬೇಕು. ಕರ್ತವ್ಯಶೀಲನಾದ ದೊರೆಯು ತಾನಾಗಿಯೇ ಹರ್ಷದಿಂದ ಮುಕ್ತಿ ಪಡೆಯುವನು. ವರ್ಣಾಶ್ರಮ ಧರ್ಮಗಳೆಗೆಲ್ಲಿ ಧಕ್ಕೆ ಬರುವುದಿಲ್ಲವೋ ಅದೇ ಸಂತೃಪ್ತಿಯ ರಾಜ್ಯವಾಗುವುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಕರ್ತವ್ಯಗಳನ್ನು ರಾಣಿ ಮಗನಿಗೆ ವಿಷದವಾಗಿ ತಿಳಿಸುತ್ತಾಳೆ. ವೇದ ವೇದಾಂಗಗಳು, ಶಾಸ್ತ್ರಗಳು, ಶ್ರಾದ್ಧ ಮಾಡುವ ವಿಧಿಗಳು, ಪಾರ್ವಣ ಶ್ರಾದ್ಧವೆಂಬ ವಿಶೇಷ ಶ್ರಾದ್ಧದ ವಿಷಯ, ಧಾರ್ಮಿಕ ವಿಚಾರಗಳು, ದಿನನಿತ್ಯದ ಕರ್ತವ್ಯಗಳು, ಸಾಮಾಜಿಕ ಕಟ್ಟಳೆಗಳು, ವಿವಾಹ ರೀತಿಗಳು–ಎಲ್ಲದರ ವಿವರಗಳನ್ನು ಮದಲಾಸೆಯು ಮಗನಿಗೆ ಹೇಳುತ್ತಾಳೆ.

ಆವಳ ಪಾಂಡಿತ್ಯ ಬೆರಗು ಪಡಿಸುವಂತಹುದು. ರಾಜ ಋತುಧ್ವಜಕುವಲಯಾಶ್ವನು ತನ್ನ ಕುಮಾರ ಅಲರ್ಕನಿಗೇ ರಾಜ್ಯಭಾರ ವಹಿಸಿಕೊಡುತ್ತಾನೆ. ಕೆಲವು ಕಾಲದ ನಂತರ ರಾಜನೂ, ರಾಣಿಯೂ ಆಶ್ರಮವಾಸಕ್ಕೆ ಹೊರಡುತ್ತಾರೆ. ಪ್ರಿಯರ ಅಗಲಿಕೆ ಎಷ್ಟು ದುಃಖವುಂಟು ಮಾಡುವುದೆಂದು ಈಗ ಮಹಾರಾಣಿಗೆ ಅರಿವಾಗುತ್ತದೆ. ತಾನು ಉಪದೇಶಿಸಿದ ಕರ್ತವ್ಯಗಳನ್ನು ಪಾಲಿಸಿಕೊಂಡಿದ್ದ ಮಗನನ್ನು ಕಂಡು ಹರ್ಷ ದುಃಖಗಳಿಂದ ರಾಣಿಯು ಬೀಳುಕೊಡುತ್ತಾಳೆ. ಮಾತ್ರ

(ಮುಂದಿನ ಪುಟ ನೋಡಿ)

ಶ್ರೀ ಕೆ. ರಮಾನಂದ

# ರಾಮಕೃಷ್ಣ ಮಠ

ಸ್ವಾಮಿ ವಿವೇಕಾನಂದ ರಸ್ತೆ, (ಪೋ) ಮೇಲೂರು-ಕ್ವಿಲಾಂಡಿ, ಕ್ಯಾಲಿಕಟ್ ಜಿಲ್ಲೆ, ಕೇರಳ - 673 319.

## ದಯವಿಟ್ಟು ಗಮನಿಸಿರಿ

ಎಪ್ಪತ್ತು ವರ್ಷಗಳ ಹಿಂದೆ 1914 ರಲ್ಲಿ ರಾಮಕೃಷ್ಣ ಆಂದೋಲನದ ಪ್ರಭಾವ ಕ್ವಿಲಾಂಡಿಯನ್ನು ತಲುಪಿತು. (ಕ್ವಿಲಾಂಡಿ 1498 ರಲ್ಲಿ ವಾಸ್ಕೊಡಗಾಮಾ ಬಂದಿಳಿದ ಐತಿಹಾಸಿಕ ಸ್ಥಳವಾಗಿದೆ.) ಕ್ವಿಲಾಂಡಿಯ ಮಠ ಆರಂಭ ಆದಾಗಿನಿಂದಲೂ ವಿವೇಕಾನಂದ ಅಧ್ಯಯನ ಗೋಷ್ಠಿಗಳನ್ನೂ, ಶ್ರೀ ರಾಮಕೃಷ್ಣ ಶಾರದಾ-ವಿವೇಕಾನಂದ ಶ್ರೀಆಯ್ಯಪ್ಪ ಬಾಲಗೋಕುಲಗಳನ್ನೂ, ಸಣ್ಣದೊಂದು ಶಿಶು ಗ್ರಂಥಾಲಯವನ್ನೂ ನಡೆಸುತ್ತಿದೆ ವಿವಿಧ ಸಂತರ ಹುಟ್ಟು ಹಬ್ಬಗಳನ್ನೂ ಕಿರಿಯ ಪ್ರಮಾಣದಲ್ಲಿ ನಡೆಸಲಾಗುತ್ತಿದೆ. ಶನಿ, ಭಾನುವಾರಗಳಲ್ಲಿ ಶಾಲಾಮಕ್ಕಳಿಗಾಗಿ ಉಚಿತ ತರಗತಿಗಳನ್ನೂ, ಯೋಗಾಸನ, ಧ್ಯಾನಗಳ ಪ್ರಕೃತಿ ಚಿಕಿತ್ಸೆ ನಡೆಸಲಾಗುತ್ತಿದೆ.

ಕಾಲಗತಿಗೆ ಸಿಕ್ಕಿ ಮಠದ ಕಟ್ಟಡ ಜೀರ್ಣವಾಗುತ್ತಿದೆ. ಅದು ವಾಸಯೋಗ್ಯವಲ್ಲದೆ, ವಿಪರೀತ ವರ್ಷದಿಂದಾಗಿ ಹಲವು ಕಡೆ ಬಿದ್ದುಹೋಗಿ ಗೆದ್ದಲು ಹತ್ತುತ್ತಿದೆ. ಹೊಸ ಕಟ್ಟಡ ಅತ್ಯಗತ್ಯವೆನ್ನಿಸಿದೆ. ಒಂದು ಗುಡಿ, ಧ್ಯಾನ ಮಂದಿರ, ಚಿಕ್ಕ ಅಡಿಗೆ ಮನೆ, ಊಟದಮನೆ, ಸನ್ಯಾಸಿಗಳ ವಾಸದ ಕೋಣೆ, ಎರಡು ಅತಿಥಿ ಕೋಣೆಗಳನ್ನು ಒಳಗೊಂಡ ಹೊಸ ಕಟ್ಟಡಕ್ಕೆ ಯೋಜನೆಯನ್ನು ಮೂರೂವರೆ ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಸಿದ್ಧಪಡಿಸಲಾಗಿದ್ದು, ಗುಡಿ ಹಾಗೂ ಧ್ಯಾನಮಂದಿರಗಳ ನಿರ್ಮಾಣದ ಮೊದಲ ಹಂತ ಅರ್ಧ ಮುಗಿದಿದೆ. ಆದರೂ ಗುಡಿಯ ಉದ್ಘಾಟನೆಯಾಗುವ ಮೊದಲು ಆಗಬೇಕಾದ ಕೆಲಸಗಳು ಬಹಳಷ್ಟಿವೆ. ಇದನ್ನೆಲ್ಲ ಮಾಡಲು ನಮಗೆ ಸುಮಾರು 60,000 ರೂಗಳ ಅಗತ್ಯವಿದೆ.

ನಮ್ಮ ಎಲ್ಲ ಸ್ನೇಹಿತರಲ್ಲಿ ಸಹಾನುಭೂತಿಪರರಲ್ಲಿ, ನಮ್ಮ ಈ ಉದಾತ್ತ ಧ್ಯೇಯದಲ್ಲಿ ಯಥಾಶಕ್ತಿ ವಂತಿಗೆ ನೀಡಬೇಕೆಂದು ಬೇಡುತ್ತೇವೆ. ಸಾವಿರ ರೂಗಳಿಗೂ ಮೇಲ್ಪಟ್ಟು ನೀಡುವವರ ಹೆಸರುಗಳನ್ನು ತಕ್ಕಂತೆ ರೂಪಿಸಲಾಗುವುದು. ಎಷ್ಟೇ ಮೊತ್ತದವಾಗಿರಲಿ, ಯಾವುದೇ ಧನ ಮಾನ್ಯಗಳನ್ನೂ ಕೃತಜ್ಞತೆಯಿಂದ ಸ್ವೀಕರಿಸಿ ಒಪ್ಪಿಕೊಳ್ಳುತ್ತೇವೆ.

ಈ ಸಂಬಂಧದಲ್ಲಿ ವಿವಿಧ ವಿದ್ವಾಂಸರ ಲೇಖನಗಳಿಂದ ಕೂಡಿದ ನೆನಪಿನ ಸಂಚಿಕೆಯೊಂದನ್ನು ಹೊರತರಲು ಯೋಜಿಸಲಾಗಿದೆ. ಉದಾರವಾಗಿ ಸಂಚಿಕೆಗೆ ಜಾಹೀರಾತು ಹಾಗೂ ಶುಭಾಶಯಗಳನ್ನು ನೀಡುವುದರ ಮೂಲಕ ಸಹಾಯ ಮಾಡಿ.

ರಾಮಕೃಷ್ಣ ಮಠಕ್ಕೆ ನೀಡುವ ಎಲ್ಲ ದಾನಗಳೂ 1961 ರ ಆದಾಯ ತೆರಿಗೆ ನಿಯಮದ 80 ಜಿ ಕಲಮಿನಂತೆ ಆದಾಯಕರ ಮುಕ್ತವಾಗಿವೆ.

ಚೆಕ್‌ಗಳು ಹಾಗೂ ಡ್ರಾಫ್ಟ್‌ಗಳನ್ನು ರಾಮಕೃಷ್ಣ ಮಠ, ಕ್ವಿಲಾಂಡಿ, ಇವರ ಹೆಸರಿನಲ್ಲಿ ಕಳುಹಿಸಬೇಕೆಂದು ಕೋರಲಾಗಿದೆ. ಉದಾರವಾಗಿ ದಾನನೀಡಿ, ಶ್ರೀ ರಾಮಕೃಷ್ಣ, ಪವಿತ್ರ ಮಾತೆ ಹಾಗೂ ಸ್ವಾಮಿ ವಿವೇಕಾನಂದರ ಆಶೀರ್ವಾದಕ್ಕೆ ಪಾತ್ರರಾಗಿರಿ.

**ಸ್ವಾಮಿ ಚಿದಂಬರಾನಂದ.**
ಅಧ್ಯಕ್ಷರು.

ವಾತ್ಸಲ್ಯ ಧಾರೆಯಾಗಿ ಹರಿಯುತ್ತದೆ ಮಗನಿಗೆ ಬಂಗಾರದ ಉಂಗುರವನ್ನು ನೀಡಿದ ರಾಣಿಯು 'ರಾಜನಾದಾಗ ರಾಜನ ಕರ್ತವ್ಯಗಳನ್ನು ನೆರವೇರಿಸು' ಎಂದು ಹೇಳಿ ಅರಣ್ಯಕ್ಕೆ ಬ್ರಹ್ಮ ಜ್ಞಾನ ಸಂಪಾದಿಸಲು ರಾಜನೊಡನೆ ತೆರಳುತ್ತಾಳೆ.

ಮದಾಲಸೆಗೆ ಅವಳ ಪತಿ ಕುವಲಯಾಶ್ವನು ಮೃತನಾಗಿದ್ದನೆಂದು ಸುಳ್ಳುಸುದ್ದಿ ತಿಳಿಸಿದಾಗ ಆಕೆ ಮೂರ್ಛಿತಳಾಗುತ್ತಾಳೆ. ಆದರೆ ಬಹಳ ಪ್ರಯತ್ನಗಳಿಂದ ಮದಾಲಸೆಯನ್ನು ಉಳಿಸಿಕೊಳ್ಳಲಾಯಿತು ಎಂದೂ ಒಂದು ಕತೆ ತಿಳಿಸುತ್ತದೆ.

ಇಂತಹ ಬುದ್ಧಿವಂತೆಯಾದ ಪ್ರಚಂಡ ಜ್ಞಾಪಕಶಕ್ತಿಯುಳ್ಳ ರಾಣಿಯರ ಉಲ್ಲೇಖ ಬಹಳ ಕಡಿಮೆ. ಅರ್ಥಶಾಸ್ತ್ರ ಪ್ರವೀಣೆಯಾದ ಈ ಮಹಾರಾಣಿ, ರಾಜಕುಮಾರರನ್ನು ಸರಿಯಾದ ಶಿಕ್ಷಣ ನೀಡಿ ಬೆಳೆಸಿದ ಮಹಾಮಾತೆಯಾಗಿದ್ದಾಳೆ. ಪ್ರಾಚೀನ ಕಾಲದ ಮಹಾವಿದುಷಿಯಾದ ರಾಣಿ ಮದಾಲಸೆಯ ವಿಷಯ ಇಂದಿನವರೆಗೆ ಆದರ್ಶಪ್ರಾಯವಾದುದೆಂದೇ ಹೇಳಬಹುದು. ★

---

(15ನೇ ಪುಟದಿಂದ)

ಪಡೆಯುವುದು ಆತ್ಮವೇ, ಆತ್ಮ ಮತ್ತು ಜಡ ಇವೆರಡೂ ಒಂದೇ ಅಸ್ತಿತ್ವದ ಎರಡು ತುದಿಗಳು. ಒಂದು ಚೇತನ ಮತ್ತೊಂದು ಅಚೇತನ. ಆದರೆ ಇವೆರಡಕ್ಕೂ ಆಧಾರ ಪರಮಾತ್ಮ. ಆದ್ದರಿಂದ ಅರವಿಂದರು ತಿಳಿಸುವಂತೆ ಪರಾತ್ಪರ ವಸ್ತು ನಮ್ಮ ಕಲ್ಪನೆಗಳಿಗೆ ಭಾವನೆಗೆ ಮೀರಿದ್ದು. ಆ ಪರಮವಸ್ತುವನ್ನು ನಾವು ಸತ್-ಚಿತ್-ಆನಂದಗಳ ಮೂಲಕ ಗ್ರಹಿಸಬಹುದು. ಈ ಸಚ್ಚಿದಾನಂದವನ್ನು ಪಡೆಯುವುದೇ ಮಾನವ ಬದುಕಿನ ವಿಕಾಸ. ವಾನರ ರೂಪಿನಿಂದ ಮನುಷ್ಯ ರೂಪವನ್ನು ಹೇಗೆ ಪಡೆದನೋ ಹಾಗೆ ಈ ವಿಕಾಸ ಕ್ರಮದಲ್ಲಿ ಅತಿಮಾನವರ ನಿರ್ಮಾಣಕ್ಕಾಗಿ ಪ್ರಯತ್ನಿಸಬೇಕು ಎಂಬುದೇ ಅರವಿಂದರು ಮಾನವಕೋಟಿಗೆ ನೀಡಿರುವ ಅಮರ ಸಂದೇಶ. ಅರವಿಂದರ ಈ ಕೆಳಗಿನ ಮಾತುಗಳನ್ನು ಮನನ ಮಾಡಿದಾಗ ಅವರು ನಮಗೆ ನೀಡಿರುವ ಸಂದೇಶ ಸ್ಪಷ್ಟವಾಗುತ್ತದೆ. "ನಾವು ಸಾಧಿಸಬೇಕಾದ ಹೊಸ ಸಂಗತಿ ಏನು? ಪ್ರೇಮ:-ನಾವಿನ್ನೂ ದ್ವೇಷ, ಅತೃಪ್ತಿಗಳನ್ನು ಮಾತ್ರ ಸಾಧಿಸಿದ್ದೇವೆ. ಜ್ಞಾನ – ಇದುವರೆಗೆ ನಾವು ಸಾಧಿಸಿದ್ದು ತಪ್ಪು ಕಲ್ಪನೆಗಳನ್ನು, ಆನಂದ-ನಮ್ಮ ಇದುವರೆಗಿನ ಸಾಧನೆ ದುಃಖ ಮತ್ತು ಉದಾಸೀನತೆಗಳು. ಶಕ್ತಿ – ಈವರೆಗೆ ನಾವು ಸಾಧಿಸಿದ್ದು ದೌರ್ಬಲ್ಯ. ಯಶಸ್ಸು ಪಡೆಯದ ಗೆಲುವುಗಳನ್ನು, ಜೀವನ-ಜನನ ಬೆಳವಣಿಗೆ, ಸಾವು ಇವಿಷ್ಟೇ ನಮಗೆ ತಿಳಿದದ್ದು. ಏಕತೆ-ನಾವು ಸಾಧಿಸಿದ್ದು ಯುದ್ಧ ಮತ್ತು ಅದರ ಸಂಬಂಧಗಳನ್ನು"

ಆದ್ದರಿಂದ ಅರವಿಂದರ ದೃಷ್ಟಿಯಲ್ಲಿ ಮಾನವ ಜಗತ್ತು ಸಾಧಿಸಬೇಕಾಗಿರುವುದು ದೈವೀರೂಪದ ವಿಶ್ವನಿರ್ಮಾಣವೇ ಆಗಿದೆ. ✦

## ಯುವವಾಣಿ

# ಅರಿಷಡ್ವರ್ಗ

### ಕಾಮ

ದೈಹಿಕ ಭೋಗ, ತತ್‌ಸಂಬಂಧವಾದೊಂದು ಬಯಕೆ, ಅಂಗ ಪ್ರತ್ಯಂಗಗಳ ರತಿಸುಖ–ಇದು ಪ್ರಕೃತಿಸಹಜ, ದೈವದತ್ತಕ್ರಿಯೆ,ಕಾಮಕ್ಕೆ ಕಣ್ಣಿಲ್ಲವೆಂಬ ಕವಿಸಾಹಿತಿಗಳ ಮಾತು ತೀರಾಸತ್ಯ. ಇತಿ ಮಿತಿಗಳೇ ಇಲ್ಲದ ಈ ಬಯಕೆ ಈಡೇರದಿದ್ದಾಗ, ಅಥವಾ ಈ ಬಯಕೆ ಈಡೇರಿಸಿಕೊಳ್ಳುವಲ್ಲಿ ತಾನು ಯಾವುದೇ ಕಾರಣದಿಂದ ಅತೃಪ್ತಿ ಹೊಂದಿದಾಗ, ಮಾನವ ಕ್ರೂರಿಯಾಗಿ ಬಿಡುತ್ತಾನೆ. ಮಾನವೀಯತೆಯ ಸದ್ಗುಣಗಳನ್ನೆಲ್ಲಾ ಬದಿಗೊತ್ತಿ ತನ್ನತನವನ್ನು ಕಳಕೊಂಡು ದುಷ್ಟ ಜಂತುವಿಗಿಂತಲೂ ಕೀಳಾಗಿ ಕಾಣಿಸಿಕೊಳ್ಳುತ್ತಾನೆ. ಅಜ್ಞಾನಿಯಾಗಿ ಒಂದು ವರ್ಗದ ಪ್ರಾಣಿಯೇ ಆಗಿರುತ್ತಾನೆ. ಮಾನವ ಮನೋಲ್ಲಾಸಕ್ಕೆ, ರಸಿಕ ಹೃದಯದ ವಿಲಾಸಕ್ಕೆ ಬೇಕೇ ಬೇಕು ಕಾಮ. ಆದರದು ಹಿತಮಿತವಾಗಿ ಕಾಲಕ್ಕೆ ಹೊಂದಿ ಕೊಂಡಿರಬೇಕು. ಆಗ ಅದು ಸರಸ ಸುಖದಾಂಪತ್ಯ ಜೀವನದ ಸಿಹಿಯಾಗುತ್ತದೆ. ಮಿತಿ ಮೀರಿದಲ್ಲಿ ಜೀವನ ನೀರಸವಾಗುತ್ತದೆ. ಕಹಿಯಾಗುತ್ತದೆ. ಕಾಮ ವಿಲ್ಲದ ಮನುಷ್ಯ ಅಪ್ರಯೋಜಕನೆಂಬ ಮಾತು ಇದೆ. ಅದನ್ನು ಜಯಿಸುವುದು ಸುಲಭವೇನಲ್ಲ. ಮುಕ್ಕಣ್ಣನನ್ನೂ ಈ ಕಾಮ ಬಿಡಲಿಲ್ಲವೆಂದ ಮೇಲೆ ಕಾಮ ಯಾರನ್ನು ಬಿಟ್ಟೀತು? ಸಾಮಾನ್ಯ ಮಾನವರಿಂದಲಂತೂ ಈ ಕಾಮ ಜಯಿಸುವುದು ಶ್ರಮ ಸಾಹಸ ಸಾಧ್ಯ. ಅಸಾಧ್ಯವೆಂದರೂ ತಪ್ಪಿಲ್ಲ ಕಾಮಾತುರಾಣಾಂ ನ ಭಯಂ ನ ಲಜ್ಜಾ! ಅಂದಿದ್ದಾರೆ ಬಲ್ಲವರು ಹಿರಿಯರನೇಕರು; ಕಾರಣವೇನು?

ಕಾಮಕ್ಕೆ ಸೀಮೆ, ಗಡಿ, ಜಾತಿ, ನೀತಿಯೆಂಬುದಿಲ್ಲ. ಕಾಮ ಬಲಿತಾಗ, ಕಾಮತುಂಬಿ ಕೊಂಡ ಮನುಷ್ಯ ಧರ್ಮದ ಕುರಿತು ಚಿಂತಿಸುವುದಿಲ್ಲ. ಸಮಯದ ಬಗ್ಗೆ ತಲೆಕೆಡಿಸಿ ಕೊಳ್ಳುವುದಿಲ್ಲ.

ಕಾಮ ಕೆಲವೆಡೆ ಕ್ರೋಧಕ್ಕೆಡೆ ಮಾಡಿಕೊಟ್ಟು ದ್ವೇಷ ಹುಟ್ಟಿಸಿ ಕಲಹದ ರಾಡಿಯನ್ನೆಬ್ಬಿಸುತ್ತದೆ. ಪ್ರಾಣಕ್ಕೆ ಸಂಚಕಾರವನ್ನೂ ತರುತ್ತದೆ. ಕುಲಮರ್ಯಾದೆ. ಘನತೆಗಳನ್ನು ಕುಂಠಿತ ಗೊಳಿಸುತ್ತದೆ.

### ಕ್ರೋಧ

ಸಿಟ್ಟಿಗೇಳುವುದು ಕೋಪ: ಕೋಪದಲ್ಲಿ ಮುಖ ಊದಿಸಿ ಕೊಂಡು, ಕಣ್ಣು ಕೆಂಪಗೆ ಮಾಡಿಕೊಂಡು ಕಾರಣವಿದ್ದೋ ಇಲ್ಲದೆಯೋ ಸಿಕ್ಕ ಸಿಕ್ಕವರ ಮೇಲೆಲ್ಲಾ ಸಿಡಿ ಮಿಡಿಗೊಳ್ಳುವುದು ಬೈಯ್ಯುವುದು ಕ್ರೋಧ – ಕ್ರೋಧ ನೆತ್ತಿಯ ಕಣ್ಣು ಎಂಬುದೊಂದು ಗಾದೆ–ಎಂದರೆ ಆಗ ಕಣ್ಣು – ಜ್ಞಾನ ಇರದು. ನಾಶಮಾಡುವ–ಸುಡುವ ಬುದ್ಧಿ ಉಂಟಾಗುತ್ತದೆ.

ಕ್ರೋಧದ ಆವೇಶದಲ್ಲಿ ಮಾನವ ಏನನ್ನೂ ಮಾಡಲೂ ತಯಾರಿರುತ್ತಾನೆ.ಸ್ನೇಹ, ಬಂಧುತ್ವ ಅಡ್ಡಿ ಬರುವುದಿಲ್ಲ. ಅಪಮಾನವಾದಾಗ, ಸ್ವಾಭಿಮಾನವನ್ನು ಕೆಣಕಿದಾಗ, ತನ್ನ ಮಾತುಗಳು ಯಾವುದೇ ಕಾರಣದಿಂದಾಗಿ ಇತರರಿಂದ ತಿರಸ್ಕರಿಸಲ್ಪಟ್ಟಾಗ ವೃಥಾ ಅಪವಾದದ ಹೊರೆ ಹೊತ್ತಾಗ, ಸೇಡಿನ ಛಲದಲ್ಲಿ, ಕೈಯಲ್ಲಿ ಕಾಸಿಲ್ಲದ ಸಮಯದಲ್ಲಿ ಮನೆಯಾಕೆಯ ಉದ್ದುದ್ದ ಬೇಡಿಕೆಗಳು ಬಂದಾಗ, ಮಾಡಿದ್ದ ತಪ್ಪು ಬಯಲಿಗೆ ಬಂದಾಗ.

—ಹೀಗೆ ನಾನಾಕಾರಣಗಳಿಂದ ತನ್ನನ್ನು ತುಚ್ಛನೆಂದು ಇತರರು ಕಾಣುತ್ತಾರೆಂಬ ಭಾವನೆ ಮನಸ್ಸಿಗೆ ಬಂದಾಗ ಕ್ರೋಧಹುಟ್ಟಿ, ಉಲ್ಬಣಿಸುತ್ತದೆ. ಸರ್ವಸಂಗ ಪರಿತ್ಯಾಗಿಗಳನ್ನೂ ಈ ಕ್ರೋಧ ಬಾಧಿಸಿತೆನ್ನುವಾಗ ಸಣ್ಣ ಪುಟ್ಟ ಮನುಷ್ಯರ ಪಾಡೇನು?

ಕೋಪದ ಮಹರ್ಷಿಯೆಂದೇ ಬಳಕೆಯಲ್ಲಿದ್ದ ದೂರ್ವಾಸ ತನ್ನ ಕ್ರೋಧದ ಬಿಸಿಯಿಂದಲೇ ಎಲ್ಲರ ಕಣ್ಣಿಗೂ ಮೊದಲಾಗಿ ಬೀಳುತ್ತಿದ್ದ. ಜಮದಗ್ನಿ ಮಹರ್ಷಿಯ ಕೋಪ ರೇಣುಕೆಯ ತಲೆ ಕತ್ತರಿಸುವಂತೆ ಮಾಡಿತು. ಪರಶುರಾಮನ ಕ್ರೋಧದ ಉರಿ ಕ್ಷತ್ರಿಯಕುಲ ಸಂಹಾರಕ್ಕೇ ಕೊಡಲಿ ಹಿಡಿದಿತ್ತು.

ಅತಿಥಿ ಸತ್ಕಾರದಲ್ಲಿ ಲೋಪ ಬಂದಾಗಲೆಲ್ಲಾ ಪುರಾಣಕಾಲದ ಮುನಿಗಳ ಕ್ರೋಧೋನ್ಮತ್ತತೆಯಲ್ಲಿ ಶಾಪ ಕೊಡುತ್ತಿದ್ದರೆಂದೂ ಕೇಳಿದ್ದೇವೆ–

ಕೋಪ, ಕ್ರೋಧ ಪಾಪದ ಬುಡಕಟ್ಟು–

### ಲೋಭ

"ಅತ್ತ ಹೋಗುವುದಿಲ್ಲ. ಇತ್ತ ಬರುವುದಿಲ್ಲ" ಎಂಬಂತಿರುವುದು ಲೋಭ ಬುದ್ಧಿ –

ಶ್ರೀ ಪಿ. ವಿ. ಕೃಷ್ಣತಂತ್ರಿ

ಸಾಬೂನು ಹಾಕಿ ಕೊಂಡು ಚೆನ್ನಾಗಿ ಮೈಕೈ ತೊಳೆದು ಕೊಂಡರಲ್ಲವೇ ಜಿಗುಟು ಹೋಗುವುದು–

ಲೋಭ ಅರ್ಥಾತ್ ಜಿಪುಣತನ ಜಿಗುಟು ಸ್ವಭಾವ ತಲೆ ಎತ್ತಿ ಸುತ್ತು ಮುತ್ತಲ ಜನರಲ್ಲಿ ಬೆರೆತು ಬಾಳದ, ಒಗ್ಗದ ಮಹಾನ್ ಸಂಕೋಚ ಪ್ರವೃತ್ತಿ. ಕಾರಣ ತನ್ನಮೇಲೆ ಹೊರೆ ಹೆಚ್ಚು ಬಿದ್ದರೆ? ಸಂಶಯ. ಸಿಕ್ಕಿದ್ದನ್ನು ಚೆನ್ನಾಗಿ ತಾನು ಉಪಯೋಗಿಸಿಕೊಂಡು ಸುಖ ಸಂತೃಪ್ತಿ ಪಡೆಯದೆ ಸಿಕ್ಕಿದ್ದನ್ನೆಲ್ಲಾ ಕೂಡಿ ಒಂದೆಡೆ ರಾಶಿ ಹಾಕುತ್ತಾ ತನ್ನನ್ನು ನಂಬಿ ಕೊಂಡಿರುವ ಇನ್ನಿತರರನ್ನೂ ಸುಖಸಂತಸಗಳಿಂದ ವಂಚಿಸುವ ನಯ–ವಿನಯ ವಂಚಕತೆ.

ತನಗೆ ಬೇಕಾಗಿದ್ದರೂ ಖರ್ಚಾದೀತೆಂಬ ಭಾವನೆಯಲ್ಲಿ ಆಸೆಕಟ್ಟಿ ಕೊಂಡು ನಿರಾಶಾಭಾವನೆಯಲ್ಲಿ ಹೆಚ್ಚಿನದ್ದನ್ನು ಬಯಸುವ, ಯಾವುದಕ್ಕೂ ಕೈ ಒಡ್ಡಲು ಹೇಸದವ ಮುಟ್ಟಿ ಕೊಡಲಾರ, ಮುಟ್ಟಲು ಬಿಡಲಾರ ಲೋಭನೆ–ಪ್ರಲೋಭನೆಗಳಲ್ಲಿ ನಡೆಸುವ ಕಾಯಕ ಕ್ಷುಲ್ಲಕ. ಲೋಭ ಲಾಭದ ಗುಟ್ಟು ಎಂದು ಕೆಲವರು ಹೇಳುತ್ತಾರೆ. ಲೋಭಿ ಮನುಷ್ಯನನ್ನು ಕಂಡಾಗ ಇದು ಇದ್ದರೂ ಇರಬಹುದೇನೋ ಅನಿಸುತ್ತದೆ. ಆದರೆ ಲೋಭಕ್ಕೊಳಗಾಗದವರು ಯಾರಿದ್ದಾರೆ ಈ ಜಗದಲ್ಲಿ. ಧಾರಾಳತನಕ್ಕೆ ವ್ಯತಿರಿಕ್ತ ಕಾರ್ಯಾಚರಣೆ ನಡೆಸುವುದು ಲೋಭದ ಪರಮಲಕ್ಷಣ.

### ಮೋಹ

ತಾನು, ತನ್ನದು, ತನ್ನವರು ಎಂಬ ಅತಿಸಲುಗೆಯ ಮಮತೆ, ವಾತ್ಸಲ್ಯ, ಪ್ರೀತಿ, ವ್ಯಾಮೋಹ–

ಪ್ರೀತಿ ಕಣ್ಣನ್ನು ಕುರುಡಾಗಿಸುತ್ತದೆ. ಜ್ಞಾನದಾಹವನ್ನು ಬತ್ತಿಸುತ್ತದೆ. ಸ್ವಜನ ಪಕ್ಷಪಾತದಲ್ಲಿ ಅಲೌಕಿಕ ಜ್ಞಾನದ ಕುರಿತು ಯೋಚಿಸುವಷ್ಟು ವ್ಯವಧಾನ ವಿರುವುದಿಲ್ಲ. ನೆಚ್ಚಿಕೊಂಡವರನ್ನು ತೃಪ್ತಿ ಪಡಿಸುವ ನೆವದಲ್ಲಿ ಧರ್ಮವನ್ನು ಕಡೆಗಣಿಸುತ್ತದೆ. ಸತ್ಯದನುಡಿಯನ್ನು ಹೀಯಾಳಿಸುತ್ತದೆ. ಬೇಕಾದರೆ ಹಿಂಸೆಯ ದಾರಿಯನ್ನೂ ಹಿಡಿದು ಆತ್ಮವಿಹೀನವಾಗಿ ವರ್ತಿಸುತ್ತದೆ–

ಮಕ್ಕಳ ವ್ಯಾಮೋಹದಲ್ಲಿ ಬಿದ್ದ ಧೃತರಾಷ್ಟ್ರ ಏನಾದ?

ಗೀತಾಚಾರ್ಯ ಶ್ರೀಕೃಷ್ಣನ ಮಾತನ್ನು ತಾನು ಮಕ್ಕಳಿಗೆ ಹಿತೋಪದೇಶ ಮಾಡದೆ ಅಪರೋಕ್ಷವಾಗಿ ಕುರುಕ್ಷೇತ್ರ ಯುದ್ಧಕ್ಕೆ ಕಾರಣನಾದ ಧರ್ಮಸಂಕಟದಲ್ಲಿ ಹಾಳಾದ.

ಜೀವನದ ಆಗುಹೋಗುಗಳಿಗೆ, ಸುಖೀ ಸಂಸಾರದ ನಿರ್ವಹಣೆಗೆ ವ್ಯಾಮೋಹ ಬೇಕು ನಿಜ.

# ಪರಮ ಗುರಿ

ಜನ್ಮಾಂತರ ಪುಣ್ಯ ವಿಶೇಷದಿಂದ ಮಾತ್ರ ಮಾನವ ಜನ್ಮ ಲಭಿಸುವುದಾಗಿ ಹೇಳುವರು. 'ಜಂತೂನಾಂ ನರಜನ್ಮ ದುರ್ಲಭಂ' ಎಂಬ ಉಕ್ತಿಯೂ ಇದನ್ನೇ ಎತ್ತಿ ಹಿಡಿಯುವುದು. ದಾಸವರೇಣ್ಯರಾದ ಪುರಂದರ ದಾಸರು ಈ ಸತ್ಯವನ್ನು ಸಾರವತ್ತಾಗಿ ತಮ್ಮೊಂದು ಹಾಡಿನಲ್ಲಿ ಹೀಗೆ ಹಾಡಿಯೂ ಇದ್ದಾರೆ:

ಮಾನವ ಜನ್ಮ ದೊಡ್ಡದು
ಇದ ಹಾನಿಮಾಡಲು ಬೇಡಿ
ಹುಚ್ಚಪ್ಪಗಳಿರಾ!

ಹೌದು! ಲೋಕದ ಅನಿತ್ಯ ವಸ್ತುಗಳತ್ತ ಆಕರ್ಷಣೆ ಹೊಂದುವುದೇ ಅಲ್ಲದೆ ಅವುಗಳ ಬಗೆಗೆ ಹುಚ್ಚು ವ್ಯಾಮೋಹ ತಾಳಿ ಬದುಕಿನ ಗುರಿಯನ್ನೇ ತಪ್ಪುತ್ತೇವೆ! ಅಜ್ಞಾನದಿಂದ ಸುಜ್ಞಾನದ ಮಾರ್ಗ ಬಿಟ್ಟು ಕತ್ತಲೆಯ ಕಲ್ಲುಮುಳ್ಳುಗಳ ದುರ್ಗಮ ಹಾದಿ ಹಿಡಿಯುತ್ತೇವೆ!

ಬದುಕು ನೀರಮೇಲಿನ ಗುಳ್ಳೆಯಂತೆ, ಯಾವ ಕ್ಷಣಬೇಕಾದರೂ ಸಿಡಿದೊಡೆಯಬಹುದು. ಬದುಕು ಮುಗಿಯುವ ಮುನ್ನ ಮುಕ್ಕಣ್ಣನಿಗೆ ಶರಣಾಗಬೇಕು. ಅವನ ಪಾದ ಪದ್ಮಗಳನ್ನು ಹಿಡಿದುಕೊಳ್ಳಬೇಕು- ಭಕ್ತಿಯಿಂದ ಭಜಿಸಬೇಕು. ಆ ಬಗೆಗೆ ಬಸವಣ್ಣ ಬಂದು ಮುತ್ತಿನಂತಹ ವಚನ ನುಡಿದಿದ್ದಾರೆ. ಅದೆಂದರೆ...

ನೆರೆ ಕೆನ್ನೆಗೆ ತೆರೆಗಲ್ಲಕೆ
ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ ಬೆನ್ನು ಬಾಗಿ
ಅನ್ಯರಿಗೆ ಹಂಗಾಗದ ಮುನ್ನ
ಕಾಲ ಮೇಲೆ ಕೈಯ ನೂರಿ
ಕೋಲ ಹಿಡಿಯದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ
ಮೃತ್ಯು ಮುಟ್ಟದ ಮುನ್ನ
ಪೂಜಿಸು ನಮ್ಮ ಕೂಡಲ
ಸಂಗಮ ದೇವನ||

ದೇಹಿಗೆ ದೇಹ ಒಂದು ಆಶ್ರಯ ಎನ್ನುತ್ತದೆ ವೇದಾಂತ. ಗೀತೆಯಲ್ಲಿ ದೇಹವನ್ನು ಅರಿವೆಗೆ ಹೋಲಿಸಿದೆ. ಅದು ಹರಿದು ನಿರುಪಯೋಗಿಯಾದಾಗ ಅದರ ಒಡೆಯ ಬೇರೆ ಅರಿವೆ ಬದಲಿಸುವಂತೆ ಆತ್ಮ ಬೇರೆ ಶರೀರವನ್ನು ಆರಿಸಿಕೊಳ್ಳುತ್ತದೆ. ಈ ಶರೀರವನ್ನು ದುಃಖದ ಮಡುವಿನಿಂದ ಪಾರು ಮಾಡುವ ನಾವೆಗೆ ಹೋಲಿಸುತ್ತಾರೆ ಒಬ್ಬ ಜಿಜ್ಞಾಸು:

ಮಾನುಷ್ಯಂ ನಾವಮಾಸಾದ್ಯ
ತರದುಃಖ ಮಹಾನದೀಂ|
ಮೂಢ ಕಾಲೋ ನ ನಿದ್ರಾಯಾ
ಇಯಂ ನೌ ದುರ್ಲಭಾ ಪುನಃ||

ಮನುಷ್ಯ ಜನ್ಮವೆಂಬ ದೋಣಿಯು ದೊರಕಿರುವಾಗ ದುಃಖದ ಮಹಾನದಿಯನ್ನು ದಾಟಬಿಡು. ಅಯ್ಯೋ ಮೂಢ, ಇದು ನಿದ್ರೆಗೆ ಸಮಯವಲ್ಲ. ಈ ದೋಣಿ ಮತ್ತೆ ದೊರಕುವುದು ದುರ್ಲಭ.

ಭಗವದನುಗ್ರಹದಿಂದ ಹಾಗೂ ಹಿಂದಿನ ನಮ್ಮ ಯಾವುದೋ ಪುಣ್ಯ ವಿಶೇಷದಿಂದ ಈಗ ಮಾನವ ಜನ್ಮ ತಳೆದಿದ್ದೇವೆ. ಡಿ.ವಿ.ಜಿ. ಅವರು ತಮ್ಮ ಮರುಳು ಮುನಿಯನ ಕಗ್ಗದಲ್ಲಿ ಮಾನವಜನ್ಮವಕುರಿತು - "ಪ್ರಾಣಿ ಪ್ರಪಂಚಕ್ಕೆ ಮಾನವಂ ಮಕುಟಮಣಿ| ಜ್ಞಾನದಿಂ ಮಾನ ತರತಮದಿ ನಯ ವಿನಯದಿ|| ಮಾನವತ್ವದ ಬೆಲೆಯೆ ಲೋಕ ಕೆಲ್ಲಾ ಬೆಲೆಯು| ಮಾನವತೆಯನು ಗಣಿಸು ಮರುಳ ಮುನಿಯ|| ಎಂದು ಹೇಳಿದ್ದಾರೆ. ಸಹ ಮಾನವರೊಂದಿಗೆ ಮಾನವೀಯತೆಯಿಂದ ನಡೆದುಕೊಂಡು ನರಜನ್ಮದ ಗುರಿಯಾದ ತನ್ನರಿವು ಪಡೆದು ಭಗವತ್ ಸಾನಿಧ್ಯ ಸೇರುವುದೇ ಪರಮ ಗುರಿಯು.



-ಡಾ|| ವಿ. ಎನ್. ಮೂರ್ತಿ

ಮೋಹ ಪಾಶದಿಂದಲೇ ಈ ಸಂಸಾರ ಬಿಗಿಯಲ್ಪಟ್ಟದ್ದಂತೂ ನಿತ್ಯ ಸತ್ಯ. ಮೋಹ ಪಾಶದಿಂದ ತಪ್ಪಿಸಿಕೊಳ್ಳುವುದು ತೋರಿಕೆಗೆ ಕಷ್ಟವಾದರೂ ಎಲ್ಲವೂ ಕ್ಷಣವೆಂದು ತಿಳಿದು ಪಾರಮಾರ್ಥಿಕವಾಗಿ ಭಗವತ್ ಚಿಂತನೆಯಲ್ಲಿ, ಸಜ್ಜನ ಸಂಗದಲ್ಲಿ ಧಾರ್ಮಿಕ ಕಥಾ ಶ್ರವಣಗಳಲ್ಲಿ ನಾವು ನಮ್ಮ ಮನಸ್ಸನ್ನು ಏಕಾಗ್ರಗೊಳಿಸಿದ್ದೇ ಆದರೆ ಪ್ರಾಪಂಚಿಕ ಮೋಹ ಮಾಯವಾಗುತ್ತದೆ. ದೈವಿಕ ವಿಚಾರಗಳತ್ತ ನಮ್ಮ ಒಲವು ಹೆಚ್ಚುತ್ತದೆ.

## ಮದ

ನಾನು ನಾನೆಂಬ ಅಹಂಕಾರ. ನನಗೆದುರಾರು? ನನಗೆ ನಾನೇ ಸಮಾನ, ಎಂಬ ದುರಭಿಮಾನ. ಮದವೇರಿದ ಆನೆ ವನಪ್ರಾಂತವೆಲ್ಲವನ್ನೂ ಹಾಳುಗೆಡವಿ ನಾಡನ್ನೂ ಹಾಳು ಮಾಡಲು ಹವಣಿಸುವಂತೆ ಮದೋನ್ಮತ್ತತೆಯ ಮಾನವ ತನ್ನಂತೆಯೇ ಇತರರು, ಎಂಬ ಸತ್ಯ ಮರೆತು ಕೀಳಾಗಿ ವರ್ತಿಸುತ್ತಾನೆ. ಕೀಳರಿಮೆಯಲ್ಲಿಯೇ ಎಲ್ಲವನ್ನೂ ನೋಡುತ್ತಾನೆ. ಎಲ್ಲರೂ ತನ್ನ ಪ್ರಭುತ್ವವನ್ನು ಒಪ್ಪಿಕೊಳಲೇ ಬೇಕೆಂಬ ಛಲದಲ್ಲಿ ಕ್ರೂರಿಯಾಗುತ್ತಾನೆ. ತಾನು ಕತ್ತಲೆಗೆ ಸಾಗುತ್ತಾ ಇತರರನ್ನೂ ಅಜ್ಞಾನತಿಮಿರಕ್ಕೆ ಒಯ್ಯುತ್ತಾನೆ. ಸತ್ಯ, ಧರ್ಮ, ನ್ಯಾಯ ಪ್ರಾಣಿ ದಯೆ ಎಲ್ಲವೂ ಇವನಿಗೆ ನಗಣ್ಯ, ಮುಖಸ್ತುತಿಗೆ ಅಗ್ರತಾಂಬೂಲ-

ಅಜ್ಞಾನದ ಅತಿರೇಕತೆಯಿಂದಲೇ ಮದ ಕಾಣಿಸುತ್ತದೆ ಎಂಬುದರಲ್ಲಿ ಸುಳ್ಳಿಲ್ಲ. ತಿಳಿದದ್ದು ಅಲ್ಪ ಆದರೂ ಹೇಳುವುದು ತುಂಬಾ. ತಪ್ಪೊಪ್ಪಿಗೆಯ ಮಾತೇ ಇಲ್ಲ. ಮದೋನ್ಮತ್ತತೆಯಲ್ಲಿ ಯಾಗ ದೀಕ್ಷಿತನಾಗಿ ಕುಳಿತ ದಕ್ಷಬ್ರಹ್ಮನ ಅವಸ್ಥೆ ಏನಾಯಿತು? ಪರಮ ಶಿವನನ್ನೇ ಧಿಕ್ಕರಿಸಿದ. ಯಾಗ ಕೆಟ್ಟಿತು. ದಾಕ್ಷಾಯಿಣಿ ಅಗ್ನಿ ಕುಂಡ ಸೇರಿದಳು. ವೀರಭದ್ರ ಹುಟ್ಟಿ ಕೊಂಡ ತಾನು ಅಜಮುಖನಾದ.

## ಮತ್ಸರ

ಹೊಟ್ಟೆಗಿಚ್ಚು, ತನ್ನೆದುರು ತನಗಿಂತ ದೊಡ್ಡವನಾಗಿ ಬಿಟ್ಟನಲ್ಲಾ-ಎಂಬ ಈರ್ಷೆ. ನನಗಿಂತ ಕೆಳ ಮಟ್ಟದಲ್ಲಿದ್ದ ಅವನು ಹೇಗೆ ಮೇಲಕ್ಕೇರಿದ ಎಂಬ ಸಂದೇಹ, ಯೋಚನೆ. ಕೆಳಗಿಳಿಸುವ ಯೋಜನೆ. ಯಾರೇ ಆಗಲಿ ತನಗಿಂತ ಹೆಚ್ಚು ಪ್ರಪಂಚದಲ್ಲಿ ಗೌರವಾನ್ವಿತ ವ್ಯಕ್ತಿಗಳಾಗಬಾರದು ಎಂಬ ತುಚ್ಛ ಬಯಕೆ. ಯಾವತ್ತೂ ಇನ್ನಿತರರು ತನ್ನ ನೆರಳಿನಲ್ಲಿಯೇ ಆಶ್ರಯ ಪಡೆದುಕೊಳ್ಳುವಷ್ಟು ಕೆಳಮಟ್ಟದಲ್ಲಿರ ಬೇಕೆಂಬ ಕೆಟ್ಟ ಆಸೆ ಬೆಂಕಿ ಸುಟ್ಟಲ್ಲಿ ಗಾಯವಾದರೆ ಸಕಾಲಿಕ

ಕಿಕಿತ್ಸೆಗಳಿಂದ ಗುಣ ಪಡಿಸಬಹುದು. ಹೊಟ್ಟೆಗೆ ಕ್ಕೆಂಬ ಅಗ್ನಿ ಸುಟ್ಟರೆ ಮಾತ್ರ ತೋರಿಕೆಗೆ ಯಾವ ಗಾಯಗಳೂ ಗೋಚರಿಸುವುದಿಲ್ಲ.

ಮದ್ದಿನಿಂದ ಗುಣಪಡಿಸುವ ಖಾಯಿಲೆಯೂ ಇದಲ್ಲ. ಮಾನವನ ವೈಮನಗಳೆರಡನ್ನೂ ಈ ಹೊಟ್ಟೆಗಿಚ್ಚು ದಾವಾಗ್ನಿ ಗಿಂತಲೂ ಹೆಚ್ಚು ಸುಡ ಬಲ್ಲುದು. ಕಿಚ್ಚಿನ ಮನುಷ್ಯನನ್ನು ಹುಚ್ಚನಿಗೇ ಹೋಲಿಸ ಬಹುದು. ಹುಚ್ಚ ಹೆಚ್ಚು ಪ್ರಪಂಚದಲ್ಲಿ ಹೈಹಿಕ ಹಾಗೂ ಮಾನಸಿಕ ಎರಡರಲ್ಲೂ ಕೊರ ಗುತ್ತಾನೆ. ಆದರೆ ಈ ಕಿಚ್ಚಿನ ವ್ಯಕ್ತಿ ಹುಚ್ಚನಾಗಿ ಮಾನಸಿಕವಾಗಿಯೇ ಕೊರಗುತ್ತಾನೆ. ಇನ್ನಿತರ ಗೆ ಅತ್ಯಂತ ಅಪಾಯಕಾರಿಯಾಗಿ ಪರಿಣಮಿ ಸುತ್ತಾನೆ. ಅಗ್ನಿ ತನುವನ್ನು ಸುಡಬಲ್ಲುದಾದರೆ ತನವನ್ನು ಸುಟ್ಟು ಬೂದಿ ಮಾಡಬಲ್ಲ ಪ್ರಚಂಡ ಶಕ್ತಿ ಈ ಹೊಟ್ಟೆಗಿಚ್ಚಿಗಿದೆ ಎಂಬುದರಲ್ಲಿ ಸಂದೇಹ ವೇನೂ ಇಲ್ಲ. ಹೊಟ್ಟೆಗಿಚ್ಚು ಮಾನವನ ಸಂಕು ಚಿತ ಭಾವನೆಗಳಿಂದ ರೂಪುಗೊಳ್ಳುತ್ತದೆ. ವಿಶಾಲ ಷ್ಟಿಯ ಲೋಪವೇ ಇದಕ್ಕೆ ಕಾರಣ. ಆಗದ ಗಾಯ ಹೊಟ್ಟೆ ಗಿಚ್ಚು. ಹೊಟ್ಟೆಗಿಚ್ಚಿನ ಫಲ ಸ್ಥಿತಿಕ ಅಧಃ ಪತನ–

ಮಾಯಾಮಯವಾದೊಂದು ಈ ವಿಶಾಲ ವಿಶ್ವ ಎಣಿಕೆಗೆ ಸಿಗದು. ಯೋಚನೆಗೆ ಎಟುಕದು ವಿಶ್ವದ ದಿವ್ಯ ಚೇತನದೆದುರು ಮಾನವ ತೀರಾ ಸಣ್ಣವ, ಅಲ್ಪ-ಈ ಅಲ್ಪ ಮಾನವನ ಮನದಲ್ಲಿಯೇ ಮನೆಮಾಡಿ ಕೊಂಡಿದೆ ಅರಿಷಡ್ವರ್ಗಗಳು. ಇದರ ದೆಸೆಯಿಂದಲೇ ಮಾನವ ಯಾವಾಗಲೂ ಅತೃಪ್ತ ನಾಗಿರುವುದು ಅಶಾಂತನಾಗಿರುವುದು.

ಮನಸ್ಸು–ಆತ್ಮ–ಕಾಮ ಅರಿಷಡ್ವರ್ಗಗಳಿಂದ ಆವೃತವಾಗಿದೆ – ಆತ್ಮನ ರಕ್ಷಣೆಯಲ್ಲ ಆತ್ಮನ ಹಕೋಟೆಯಲ್ಲಿ ಮನಸ್ಸು ಮಾನವ ಮನ ಸ್ಸಿನ ಕಾಮನೆಗಳು ಉದ್ವೇಗಗಳು, ವಿಧ ವಿಧ ಫಲಾಪೇಕ್ಷೆಯಲ್ಲಿ ರೂಪು ಗೊಂಡ ಚಿತ್ತ ವಿಕಾರ ಗಳೇ ಅರಿಷಡ್ವರ್ಗಗಳಾಗಿದ್ದರೂ ಮಾನವ ನಡೆ ಸುವ ಪ್ರತಿಯೊಂದು ಕಾಯಕದಲ್ಲಿಯೂ ಅಡ್ಡಿಯಾ ಗುತ್ತವೆ. ನಿತ್ಯ ಸುಖ, ಶಾಂತಿ, ನೆಮ್ಮದಿ ದೊರಕಿಸಿ ಕೊಡುವಲ್ಲಿ ಪಡೆಯುವಲ್ಲಿ ಆತಂಕಕಾರಿಗಳಾಗಿವೆ. ಹೀಗಿರುವಾಗ ಅವನ್ನು ನಿಗ್ರಹಿಸುವುದು ಹೇಗೆ? ಜಯಿಸುವುದು ಹೇಗೆ? ಹೇಳಿದಷ್ಟು, ಬರೆದಷ್ಟು, ಸುಲಭವೇ?

ತಾನು ಒಳ್ಳೆಯವನಾಗಿ ಇನ್ನಿತರರ ಒಳಿತಿಗೆ ತಾನು ಕಾರಣವಾಗಲೇ ಬೇಕೆಂಬ ಛಲದೊಂದಿಗೆ ಸದ್ಭಾವನೆ, ಸದ್ಗುಣಗಳನ್ನು ಬೆಳೆಸಿ ಕೊಳ್ಳಬೇಕು. ತನ್ನಂತೆಯೇ ಇನ್ನಿತರ ಜೀವ ಜಂತುಗಳಿಗೂ ಈ ವಿಶ್ವದಲ್ಲಿ ಜೀವಿಸುವ ಹಕ್ಕಿದೆ. ಅವುಗಳದ್ದೇ ಆದ ಆಸೆ, ಆಕಾಂಕ್ಷೆಗಳು ಬೇಕಾದಷ್ಟಿವೆ. ಈ ಸಹಜ ಬಯಕೆಗಳ ಪೂರೈಕೆಗೋಸುಗವೇ ಅವುಗಳು ಕಾಯಕ ನಡೆಸುತ್ತವೆ. ನಾವು ನಡೆಸುವ ಕಾರ್ಯ ಅವುಗಳು ನಡೆಸುವ ಕಾಯಕಕ್ಕೆ ಮಾರಕವಾಗ ದಂತೆ ನಾವು ನೋಡಿಕೊಳ್ಳಬೇಕು. ಅದ ರೊಂದಿಗೆ ನಾನು ಹೆಚ್ಚು, ನೀನು ಕಡಿಮೆ ಎಂಬ ಭೇದ ಭಾವನೆ ಬಿಟ್ಟು ನಾವೆಲ್ಲಾ ದೇವರ ಮಕ್ಕಳು, ಸರಿಸಮಾನರು ಎಂಬ ಸತ್ಯದ ಕಲ್ಪನೆ ಮೂಡಿದಲ್ಲಿ–

ಮೂಡಿದ ಕಲ್ಪನೆಗೆ ಸರಿಯಾಗಿ ನಾವು ಧರ್ಮ ಸಮ್ಮತಮಾರ್ಗದಲ್ಲಿ ಮುನ್ನಡೆದದ್ದೇ ಆದರೆ ಈ ಅರಿಷಡ್ವರ್ಗಗಳನ್ನೇಕೆ, ನಮ್ಮನ್ನೇ ನಾವು ಜಯಿ ಸಿಕೊಂಡು ಆತ್ಮಾರಾಮರಾಗಿ ಆತ್ಮೋನ್ನತಿ ಯೊಂದಿಗೆ ಮುಕ್ತ ಜೀವಿಗಳಾಗಿ ಪರಮ ಕೈವಲ್ಯ ಸುಖ ಪಡೆಯ ಬಹುದು.

— —

(12 ನೇ ಪುಟದಿಂದ)

ಬಕುಳ ಮಲ್ಲಿಗೆ ಜಾಜಿ ಸೇವಂ
ತಿಗೆ ಸುವಾಸಿತ ಕೇದಗೆಯರಳು
ವಿಕಸಿತ ಪರಿಮಳಿತದವನ ಮರುಗದಳ ಪಚ್ಚೆಗಳ ।
ಸಕಲ ದೇವರ ದೇವರುಗಳಿಗೆ
ಸಕಲ ಸೌರಭವು ಮುಡಿಪೆನುತಲಿ
ವೃಕೋದರ ಜನಕನು ನಲಿದನಂದಾವನದೊಳಾಡಿ ॥ ೨೨

ನಸುಕಿನೊಳಗೆದ್ದು ಪತಿಪೂಜೆಗೆ
ನಸುವಿರಿದ ಪೊಸಪೂಗಳನಿರಿಸಿ
ರಸಭರಿತ ಪಣ್ಣುಗಳ ನೈವೇದ್ಯಕೆನುತಂದದೊಳು ।
ಅಸುಲೋಪಪರಿದೊಲು ಕರ್ಮದೊಳ್
ಕಸನುಪಾಕವನಣಿಗೊಳಿಸಿರಿಸಿ
ಬೇಸರಿಸದತಿಥಿಗಳ ಹಾದಿಯನಿದಿರು ನೋಡುತಿರಲ್ ॥ ೨೩

ಸಲವು ತೆರದುಣಿಸುಗಳನೆಲ್ಲವ
ಸಲವು ತೆರದ ತನಿವಿರಿದ ಪಣ್ಣಂ
ಸಲವು ಬಗೆ ಭಕ್ಷಗಳನನಸೂಯೆಯಣಿಗೊಳಿಸಿದಳಲ್ಲಿ ।
ಸಲವು ತೆರದಲಿ ಪರಮ ಪೂಜೆಯ
ಸಲವ ನೆನೆಯದೆ ಗೈವೆನೆನುತಲಿ
ಸಲವು ಕಾಣದ ಬಗೆಯನಸುಯೆಯಣಿಗೊಳಿಸಲ್ ಧರದಿ॥ ೨೪

ಭವತಿ ಭಿಕ್ಷಾಂದೇಹಿ ದನಿಯೊಂ
ನವಳ ಕಿವಿಗೇಳ್ದುರದೆ ಬರುತಲಿ
ದೇವದೇವರ ಕಂಡಿದಿರ್ಗೊಂಡಳವರ ಭಕುತಿಯೊಳ್ ।
ಅವರನೊಳಗೊಯ್ದಾಸನವನಿ
ತ್ತವರ ಬರವಿಗೆ ಹರುಷ ತೋರುತ
ಲವನಿಯಾಳ್ವರನರಿಯದಲೆ ಭಿಕ್ಷೆಗಣಿಮಾಡಿದಳು ॥ ೨೫

ಮನೆಯಬಾಗಿಲ್ದಾಗಮಿಸಿದರ
ಮುನಿಸು ಮಾಡದಪೇಕ್ಷಿತದುಣಿಸ
ಬೋನವಿಕ್ಕುವ ಸತಿಯ ಕಾಯಕಮುಮನೆ ಮಾಣಿಸುವ ।
ಮನವ ಮಾಡಿದತಿಥಿ ಮುನೀಂದ್ರರು
ಮನದಿ ನಗುತಲಿ ಸತಿಯ ಗೆಲ್ವಾ
ಸನವ ಕೊಳ್ವಂದದೊಳಗಾಸನಗಳೊಳು ಮಂಡಿಸಿದರ್ । ೨೬

ಸುತ್ತಿಬಂದಿಹದಣಿವನಾರಿಸಿ
ಅತ್ರಿಮುನಿತಾ ಬರಲೊಡನೆ ತಾ
ವಾತನೊಡಗೊಂಡುಣಿಸನಾರೋಗಿಪುದು ಮುದದಿಂದ ।
ಚಿತ್ತ ಬೇಡಿದನುಣಲುನೀಡುತ
ಚಿತ್ತ ಪೂರ್ವಕ ಸೇವೆಮಾಳ್ಪೆಂ
ಚಿತ್ತಪೂರ್ವಕ ಪರಸುವುದು ನಮ್ಮನೆನುತೆರಗಿದಳು ॥ ೨೭

ಹೊತ್ತುಮಿಾರುತಲಿಹುದು ಹಸಿದಿದೆ
ವಿತ್ತಿಮಗೆ ಕೂತತಣಿಸಲ್ಲದೊ
ಡೆತ್ತಲಾದರು ಪೋಗವೇಳ್ಕೆಂದಬ್ಬರಿಸಿ ನುಡಿಯೆ ।
ಸತಿ ಭಯದೊಳು ನಡುಗುತಲಿ ಜಣದೊ
ಳತ್ತಪೆನೆನುತ ರಂಗವಲ್ಲಿಯ
ಸುತ್ತಿ ಚಿಗುರೆಲೆಯಿಕ್ಕಭಿಗರಿಸಿ ಖಾದ್ಯಗಳ ತಂದಳ್ ॥ ೨೮

ನಿರ್ಗುಣಗೆ ಭಿಕ್ಷೆ ಬಿದಿಯಾಟವ
ಜಗರ ಶಯನಗೆ ಮೇಣವನ ಮಗ
ಜಗದ ಜನಕಗೆ ವಿಧಿಗಿದೆತ್ತಣ ಬಿದಿಬರಹವಾಯ್ತೋ।
ಜಗದ ಹಸಿವ ನಡಗಿಪನಿರ್ಮೋ
ಹಿಗಳಿಗೆತ್ತಣಹಸಿವು ಭಕ್ತರ
ಸುಗುಣಗಳನೊರೆಹಚ್ಚುವುಪಾಯವಲ್ಲದಿರೆ॥ ೨೯

ಎಲೆ ರಮಣಿ ನಿರ್ವಾಣದೊಳು ಬಡಿ
ಸಲ್ಲದೊಲ್ಲೆವು ಫಲಗಳಾದಿಯ
ಎಲೆಯೊಳಿಹ ಪರಿಪರಿಯ ಪರಿಮಳಿಪೀತಿನಿಸುಗಳನು।
ನೀಲಲೋಚನೆ ನಿನ್ನರೂಪದಿ
ಸಲೆ ಮರುಳುವೋದೆವಮಮಾ ನೀ
ನಿಲದೆ ನಮ್ಮಮನೋರಥವ ನಡೆಸುವುದು ಈಗೆನಲ್॥ ೩೦

ಅತಿಥಿಗಳಿಗಿಷ್ಟದುಣಿಸಿಕ್ಕುವೆ
ಡೆ ತನಗೆ ಪರಿಕಿಸುವ ನೆವವಿದೆಂ
ದತ್ರಿಪತ್ನಿಯರಿತಳವರನುಡಿಯಾಲಿಸುತ ಜಣದಿ।
ಇತ್ತನೀಕ್ಷಣದೆನುತೊಳಪೊಗುತ
ಪತಿಯ ಪಾದವ ನೆನೆದಿವರೆನಗೆ
ಪುತ್ರರೆನುತ ಮನದಿ ನುಡಿಯುತಲಿ ಬಂದಳವರೆಡೆಗೆ॥ ೩೧

ಅಚ್ಚರಿಯದೇನೆನಲಿ ತಾಸತಿ
ಸಚ್ಚರಿತಳನಸೂಯೆ ಮನದೊಳ
ಗುಚ್ಚರಿಸಿದಾಕ್ಷಣದೊಳು ಶಿಶುಗಳಾಗೆಸೆದರವರು।
ಮಚ್ಚರಿಸಿದ ಸತಿಯರಿಗೆ ಮತಿಯ
ನೆಚ್ಚರಿಸೆ ಲೋಕದ ಪತಿಗಳಂ
ದಿಚ್ಛೆಯಿಂ ಶಿಶುಗಳೆನಿಸಿದರತ್ರಿಸತಿಸಾಧ್ವಿಯೊಳು॥ ೩೨

ಜಗದ ಸೃಷ್ಟಿಸ್ಥಿತಿ ಲಯವ ಮಾ
ಳ್ಪಗಹನತೆಯೊಳು ಬಿಡುವೆ ದೊರಕದ
ನಗಧರಾದಿಗಳಿಗೆ ವಿರಮಿಸುವ ಬಯಕೆ ಮೂಡಿದುದೋ
ಅಂಗಜಪಿತಗೆ ವಸುಧೆಯೊಳುದಸಿ
ಮಗನೆನಿಸುವ ಬಯಕೆಯೊ ಮೇಣಾ
ಮುಗುದೆಯೊಳ್ತೋರ್ಪ ಕರುಣೆಯಿದೋಯೆನಿಸುವೊಡೆಸೆದರು

ನಗುಮೊಗದಿ ಬಂದಳನಸೂಯೆಯು
ಲಗುಬಗೆಯಲಿ ಬಡಿಸಲಣಿಗೊಳುತ
ಲಾಗ ನಿರ್ವಾಣದೊಳು ಮುನಿಜನಗಳಿಗೆ ಭಿಕ್ಷೆಯನು।
ಸೊಗದ ಶಿಶುಗಳನಲ್ಲಿ ನೋಡುತ
ಮೊಗದೊಳಚ್ಚರಿತುಂಬಿಬರಲು
ಶಿಶುಗಳ ಲಾಲಿಸಿದಳು ರಮಣಿ ಭಯಭರಿತಳುದ್ವೇಗಳ್॥ ೩೩

ರಮಣಿ ದಿಗ್ಭ್ರಮೆಯಲಿ ತೊಳಲಿದಳು
ವಿಮಲ ಶಿಶುಗಳ ನೋಡಿರಿಸಿಗಳ
ನು ಮನ ಮರೆಯಿತು ಹರುಷವುಕ್ಕಿತು ತನುಮನದಲಾಗಳ್।
ಅಮಮ ಮಕ್ಕಳಿರದೆನಗಾಪರ
ಬೊಮ್ಮನೀಡಿಹ ವರವಿದೆನುತಿಂ
ದುಮುಖಿ ಹೆತ್ತಮ್ಮನೊಲು ರಮಿಸುತ ನಲಿದು ಹರ್ಷಿಸಿದಳ್

ಹರುಷವುಕ್ಕಿತು ಬಾಷ್ಪವುದುರಿದ
ವುರವಣಿಸಿ ನಯನದಿ ಪುಳಕಗೊಂ
ಡಿರೆ ತನು ಸರಸಿಜಮುಖಿ ಮೈಮರವೆಯಲಿ ನಿಂದಿರಲು।
ಕರೆಯುತಳುವಿನದನಿ ಶಿಶುಗಳಿ
ಜ್ಚರಿಸೆ ಸತಿಯೋಡೋಡಿ ಬರುತಲಿ
ಮುರಹರಾದಿಗಳ ಪರಿಪರಿಯಲಿ ಲಾಲಿಸಿದಳಾಗ॥ ೩೪

ನಿತ್ಯದೊಳು ಗುರುಕಥೆಯ ಪಠಿಸಲು
ಸತ್ಯದೊಳಗೀವ ಬಯಕೆವರವ
ಸತ್ಕಥೆಯ ಸಪ್ತಾಹದೊಳು ಭವದ ಪರಿಹರವಿಹುದು।
ಅತಿಸುಲಭ ಮುಕುತಿಯೆನಿಪ ಗುರು ಚ
ರಿತ್ರೆಯೋದುವವರಿಗೆ ನಿಜದಲಿ
ಸತ್ಪಥವ ತೋರುತ ಗುರುಕರುಣೆಯನು ದೊರಕಿಪುದು॥



# ರುದ್ರಾಭಿಷೇಕ

"ಅಭಿಷೇಕ ಪ್ರಿಯೋ ರುದ್ರಃ
ಅಲಂಕಾರ ಪ್ರಿಯೋ ವಿಷ್ಣುಃ"

ಎಂಬುದೊಂದು ಆರ್ಯೋಕ್ತಿ. ಅಲಂಕಾರವು ವಿಷ್ಣುವಿಗೆ ಪ್ರಿಯವಾದರೆ ಅಭಿಷೇಕವು ರುದ್ರನಿಗೆ ಪ್ರಿಯ. ಆದುದರಿಂದಲೇ ರುದ್ರನಿಗೆ ಎಲ್ಲೆಡೆಗಳಲ್ಲೂ ಅಭಿಷೇಕದಿಂದ ಕೂಡಿದ ಅರ್ಚನೆಯನ್ನು ನೋಡುತ್ತೇವೆ. ಹಾಗೆಂದ ಮಾತ್ರಕ್ಕೇ ವಿಷ್ಣುವಿಗಾಗಲೀ, ಇತರ ದೇವಾಧಿದೇವತೆಗಳಿಗಾಗಲಿ, ಅಭಿಷೇಕವಿಲ್ಲವೆಂಬುದು ಇದರರ್ಥವಲ್ಲ. ವೇದೋಕ್ತವಾದ ಕೆಲವು ಅಭಿಷೇಕ ಸೂಕ್ತಗಳು ರುದ್ರನನ್ನೇ ಕುರಿತದ್ದಾಗಿವೆ. ಉದಾಹರಣಾರ್ಥವಾಗಿ ಕೃಷ್ಣಯಜುರ್ವೇದದ ತೈತ್ತಿರೀಯ ಸಂಹಿತೆಯ ಚತುರ್ಥ ವೈಶ್ವದೇವ ಕಾಂಡದಲ್ಲಿ ಬರುವ 'ಶ್ರೀರುದ್ರ ಪ್ರಶ್ನಃ' ಮತ್ತು 'ಶ್ರೀ ಚಮಕ ಪ್ರಶ್ನಃ' ಎಂಬ ಎರಡೂ ಮಂತ್ರಭಾಗಗಳಲ್ಲಿ ರುದ್ರನನ್ನು ವಿಶೇಷವಾಗಿ ಸ್ತುತಿಸಿದೆ. ಅಥರ್ವಶಿರ ಉಪನಿಷತ್, ರುದ್ರಹೃದಯೋಪನಿಷತ್, ಕಾಲಾಗ್ನಿ ರುದ್ರೋಪನಿಷತ್, ನೀಲರುದ್ರೋಪನಿಷತ್, ರುದ್ರೋಪನಿಷತ್ ಮುಂತಾದ ಅನೇಕ ಉಪನಿಷತ್ತುಗಳು ರುದ್ರನ ಪ್ರಾರ್ಥನೆಗೇ ಮೀಸಲಾಗಿವೆ.

ಈಶ್ವರನಿಗಿರುವ ಅನೇಕ ಪರ್ಯಾಯ ನಾಮಗಳಲ್ಲಿ ರುದ್ರನೆಂಬುದೂ ಒಂದು. 'ರುದ್ರ' ಎಂಬ ಪದಕ್ಕೆ ಸಾಯಣಾಚಾರ್ಯರು ಅನೇಕ ಅರ್ಥಗಳನ್ನು ಹೇಳಿದ್ದಾರೆ. ವೇದಕ್ಕೆ ಭಾಷ್ಯವನ್ನು ಬರೆದಿರುವವರಲ್ಲಿ ಸಾಯಣಾಚಾರ್ಯರೂ ಒಬ್ಬರು.

೧. "ರುದಂ ಸಂಸಾರ ದುಃಖಂ ದ್ರಾವಯತಿ ನಾಶಯತೀತಿ ರುದ್ರಃ"-ಅಂದರೆ ಜೀವನದಲ್ಲಿ ಬರುವ ದುಃಖಗಳನ್ನು ಹೋಗಲಾಡಿಸುವವನೇ ರುದ್ರನು.

೨. "ಅಶುಭದ್ರಾವಕೋ ರುದ್ರಃ" – ಅಮಂಗಳವಾದುದನ್ನು ಹೋಗಲಾಡಿಸುವವನೇ ರುದ್ರ. ಆದುದರಿಂದಲೇ ರುದ್ರನನ್ನು 'ಶಂಕರ' ಎಂದು ಕರೆಯುವರು.

'ಶಂಕರಾಯೇತಿ ಶಂ ಕರಾಯ' ಎಂದರೆ ಮಂಗಳವನ್ನು ಉಂಟುಮಾಡುವವನು.

೩. 'ರುದ್ರಸ್ತೇಜಸ್ವೀತಿ' ಎಂಬ ಉಕ್ತಿಯಂತೆ ಮಹಾತೇಜಸ್ವೀ ರುದ್ರನು.

೪. "ರುತಿಂ ಶಬ್ದಂ ವೇದರೂಪಂ ರಾತಿ ದದಾತೀತಿ ರುದ್ರಃ" ಎಂಬ ವ್ಯುತ್ಪತ್ತಿಯ ಪ್ರಕಾರ ಶಬ್ದರೂಪವಾದ ವೇದವನ್ನು ಪ್ರಪಂಚಕ್ಕೆ ಅನುಗ್ರಹಿಸಿದವನೇ ರುದ್ರನು. ಆದುದರಿಂದಲೇ

"ನಾರುದ್ರಃ ಕ್ರಮಪಾಠಕಃ"

ಎಂದಿದ್ದಾರೆ. ಅಂದರೆ ರುದ್ರನ ಅಂಶವಿಲ್ಲದವನು ಕ್ರಮಾಂತವಾಗಿ ವೇದಾಧ್ಯಯನ ಮಾಡಲಾರ.

"ಯೋ ವೈ ವೇದಾಂಶ್ಚ ಪ್ರಹಿಣೋತಿ" ಎಂಬ ಉಪನಿಷದ್ವಾಕ್ಯದಂತೆ ಚತುರ್ಮುಖ ಬ್ರಹ್ಮನಿಗೆ ಸೃಷ್ಟಿಕಾಲದಲ್ಲಿ ವೇದಗಳನ್ನು ಅನುಗ್ರಹಿಸಿದವನೇ ರುದ್ರನು.

ರುದ್ ರೋಧಿಕಾ ಬಂಧಿಕಾ
ಮೋಹಿಕಾಶಕ್ತಿಃ ತದ್ವಾನ್ ರುದ್ರಃ

ಎಂಬ ವಾಕ್ಯಾನುಸಾರ 'ರೋಧಿಕಾ' ಎಂದರೆ ತಡೆಯುವಿಕೆ, 'ಬಂಧಿಕಾ' ಎಂದರೆ ಕಟ್ಟಿಹಾಕುವಿಕೆ ಮತ್ತು 'ಮೋಹಿಕಾ' ಎಂದರೆ ಮೋಹವನ್ನುಂಟುಮಾಡುವಿಕೆ-ಈ ಮೂರೂ ಶಕ್ತಿಗಳು ಯಾರಲ್ಲಿ ಇದೆಯೋ ಅವನೇ ರುದ್ರನು. ಅಂದರೆ ಪಾಪಿಗಳನ್ನು ಮೋಹಗೊಳ್ಳುವಂತೆ ಮಾಡಿ ಬಂಧಿಸುವವನೂ, ಭಕ್ತರನ್ನು ಪಾಪ ವಿಮುಕ್ತರನ್ನಾಗಿ ಮಾಡಿ ನರಕದಿಂದೆತ್ತಿ ಉದ್ಧರಿಸುವವನೂ ರುದ್ರನೇ.

ಯೋಗಾಚಾರ್ಯ **ಕೆ. ಕೇಶವಮೂರ್ತಿ**

ರುತ್ಯಾ ವೇದರೂಪಯಾ
ಧರ್ಮಾದೀನವಲೋಕಯತಿ
ಪ್ರಾಪಯತೀತಿ ವಾ ರುದ್ರಃ

ಎಂದರೆ ವೇದರೂಪವಾದ ಮಾತಿನಿಂದ ಧರ್ಮಾಧರ್ಮಗಳನ್ನು ನಿಯಮನ ಮಾಡುತ್ತಾ ಅವುಗಳಿಗೆ ತಕ್ಕಂತೆ ಫಲವನ್ನು ಕೊಡುವವನೇ ರುದ್ರನು.

"ರುತ್ಯಾ ಪ್ರಣವ ರೂಪಯಾ ಸ್ವಾತ್ಮಾನಂ ಪ್ರಾಪಯತೀತಿ ರುದ್ರಃ" ಅಂದರೆ ಓಂಕಾರರೂಪವಾದ ಶಬ್ದದಿಂದ ಸ್ವಸ್ವರೂಪವೇ ಆದ ಆತ್ಮವನ್ನು ಪಡೆಯುವಂತೆ ಪ್ರೇರಿಸುವವನೇ ರುದ್ರನು.

## ರುದ್ರರು ಎಷ್ಟುಮಂದಿ?

ಇಂತಹ ರುದ್ರನು ಒಬ್ಬನೋ ಅಥವಾ ಅನೇಕರೋ ಈ ಸಂದೇಹಕ್ಕೆ ಕಾರಣ ಪುರಾಣಗಳಲ್ಲಿ ದೇವತೆಗಳನ್ನು ಪಟ್ಟಮಾಡುವಾಗ 'ಏಕಾದಶ ರುದ್ರರು' ಎಂದು ಹೇಳಿ ಹನ್ನೊಂದು ಜನರನ್ನು ಪಟ್ಟಮಾಡಿದ್ದಾರೆ. ವೇದದ ಶ್ರೀರುದ್ರ ಸೂಕ್ತದಲ್ಲಿ,

"ಸಹಸ್ರಾಣಿ ಸಹಸ್ರಶೋ
ಯೇ ರುದ್ರಾಃ"

ಅಂದರೆ ರುದ್ರರು ಸಹಸ್ರಾರು ಮಂದಿ ಎಂದು ಹೇಳಿದೆ. ಅದೇ ರುದ್ರಪ್ರಶ್ನೆಯಲ್ಲಿ ಮತ್ತೊಂದು ಕಡೆ,

"ಏಕ ಏವ ರುದ್ರೋ
ನ ದ್ವಿತೀಯಾಯ ತಸ್ಥೇ"

ಅಂದರೆ ರುದ್ರನು ಒಬ್ಬನೇ, ಎರಡು ಎಂಬುದಿಲ್ಲ ಎಂದಿದೆ. ಹಾಗಾದರೆ ಈ ದ್ವಂದ್ವ ವಾಕ್ಯದ ಸಾಮಂಜಸ್ಯವೇನು?

ಪುರಾಣಗಳಲ್ಲಿ ಸೃಷ್ಟಿಕ್ರಮವನ್ನು ಹೀಗೆ ವರ್ಣಿಸಿದೆ. ಬ್ರಹ್ಮನು ತನ್ನ ಸೃಷ್ಟಿ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನ | ಪ್ರಾ 8–00 | ಪ್ರಾ 8–30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | " | 40–00 |
| 3. | ಪುಳಿಯೋಗರೆ | " | 50–00 |
| 4. | ಪೊಂಗಲಂ | " | 55–00 |
| 5. | ಸಕ್ಕರಪೊಂಗಲ್ | " | 55–00 |
| 6. | ಶಾಕರ ಭಾತ್ | " | 85–00 |
| 7. | ಕೇಸರೀ ಭಾತ್ | " | [illegible]0–00 |
| 8. | ಸೀರ | " | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ.

ಕಾರ್ಯಕ್ಕೆ ನೆರವಾಗಲೆಂದು ತನ್ನ ಕೋಪದಿಂದ ರುದ್ರನನ್ನು ಸೃಷ್ಟಿಸಿದನು. ರುದ್ರನು ತನ್ನಂತೆಯೇ ಶರೀರ, ರೂಪ, ವೇಷಭೂಷಣಗಳನ್ನುಳ್ಳ ಮರಣರಹಿತರಾದ ಸಹಸ್ರಾರು ರುದ್ರರನ್ನು ಸೃಷ್ಟಿಸಿಬಿಟ್ಟನು. ಇದನ್ನು ನೋಡಿದ ಬ್ರಹ್ಮನು, ರುದ್ರನ ಈ ಸೃಷ್ಟಿಕ್ರಮವು ಹೀಗೆಯೇ ಮುಂದುವರಿದರೆ ಎಲ್ಲರೂ ಅಮರರೇ ಆಗಿಬಿಡುವುದರಿಂದ ಈ ಬ್ರಹ್ಮಾಂಡದಲ್ಲಿ ಸ್ಥಳವಿಲ್ಲದಂತಾಗುವುದೆಂದು ಬಗೆದು ಇನ್ನು ಮುಂದೆ ಸೃಷ್ಟಿಸಕೂಡದೆಂದು ರುದ್ರನಿಗೆ ತಿಳಿಸಿ, ಅಲ್ಲಿಯವರೆಗೆ ಸೃಷ್ಟಿಸಿದ್ದ ಸಮಸ್ತ ರುದ್ರರಿಗೂ ಬ್ರಹ್ಮಾಂಡದಲ್ಲಿ ಬೇರೆಬೇರೆ ಸ್ಥಾನಗಳನ್ನು ಕಲ್ಪಿಸಿಕೊಟ್ಟನು. ಇದರಿಂದ ತಿಳಿದು ಬರುವುದೇನೆಂದರೆ ರುದ್ರನು ಒಬ್ಬನೇ ಆದರೂ ಮೂರ್ತಿಭೇದದಿಂದ ಅನೇಕರಾಗಿದ್ದಾರೆ. ಆದ್ದರಿಂದ ವೇದದಲ್ಲಿ ರುದ್ರನನ್ನು ಏಕನೆಂದೂ, ಅನೇಕನೆಂದೂ ಕರೆದಿರುವುದು ಸೂಕ್ತವಾಗಿಯೇ ಇದೆ.

ಇಂತಹ ರುದ್ರನ ವರ್ಣನೆಯನ್ನು ರುದ್ರಾಧ್ಯಾಯವು ಚೆನ್ನಾಗಿ ಮಾಡಿದೆ. ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ಮಾಡುವ ಉದ್ದೇಶದಿಂದ ಒಬ್ಬ ಭಗವಂತನೇ ಮೂರೂ ರೂಪಗಳಲ್ಲಿ ದರ್ಶಿತನಾಗಿರುವುದರಿಂದ ಮೂಲತಃ ಭಗವಂತನು ತ್ರಿಮೂರ್ತಿಗಳೆಂಬ ಉಪಾಧಿಗಳನ್ನೂ ಮೀರಿದ ಪರಬ್ರಹ್ಮನೇ ಆಗಿರುತ್ತಾನೆ. ಈ ಅರ್ಥದಲ್ಲಿಯೂ ಸಹ ರುದ್ರನು ಒಬ್ಬನೇ. ಈ ವಿಷಯವನ್ನು ಅಥರ್ವಶಿರ ಉಪನಿಷತ್ತಿನಲ್ಲಿ ಕಾಣಬಹುದು.

ಓಂ ಯೋ ವೈ ರುದ್ರಃ ಸ ಭಗವಾನ್
ಯಶ್ಚ ಬ್ರಹ್ಮಾ ತಸ್ಮೈ
ವೈ ನಮೋ ನಮಃ । ೧ ॥
ಓಂ ಯೋ ವೈ ರುದ್ರಃ ಸ ಭಗವಾನ್
ಯಶ್ಚ ವಿಷ್ಣುಸ್ತಸ್ಮೈ
ವೈ ನಮೋ ನಮಃ । ೨ ॥
ಓಂ ಯೋ ವೈ ರುದ್ರಃ ಸ ಭಗವಾನ್
ಯಚ್ಚ ಸರ್ವಂ ತಸ್ಮೈ
ವೈ ನಮೋ ನಮಃ ॥ ೩ ॥

ಎಲ್ಲವೂ ರುದ್ರನೇ ಎಂಬುದು ಇದರ ಅರ್ಥ. ಅವನೇ ಪರಮೇಶ್ವರನು, ಸರ್ವಜ್ಞನು, ಶಿವನು– ಎಂದು ವೇದಗಳು ಸ್ತುತಿಸಿವೆ. ರುದ್ರಹೃದಯೋಪನಿಷತ್ತಿನಲ್ಲಿ ಹೀಗೆ ಹೇಳಿದೆ.

ಸರ್ವದೇವಾತ್ಮಕೋ ರುದ್ರಃ
ಸರ್ವದೇವಾಃ ಶಿವಾತ್ಮಕಾಃ
ರುದ್ರಸ್ಯ ದಕ್ಷಿಣೇ ಪಾರ್ಶ್ವೇ
ರವಿರ್ಬ್ರಹ್ಮಾ ತ್ರಯೋಽಗ್ನಯಃ ।೪

ಅಂದರೆ ಎಲ್ಲ ದೇವತೆಗಳ ಆತ್ಮನೂ ರುದ್ರನೇ, ಎಲ್ಲ ದೇವತೆಗಳೂ ಶಿವನ ಆತ್ಮವೇ. ರುದ್ರನ ಬಲಭಾಗದಲ್ಲಿ ಸೂರ್ಯ, ಬ್ರಹ್ಮ ಮತ್ತು ಮೂರು ವಿಧವಾದ ಅಗ್ನಿಗಳು ಇದ್ದಾರೆ.

ಇದರ ಮಥಿತಾರ್ಥವೇನೆಂದರೆ "ಏಕೋ ದೇವಃ ಸರ್ವಭೂತೇಷು ಗೂಢಃ" ಅಂದರೆ ಒಬ್ಬನೇ ರುದ್ರನು ಎಲ್ಲರಲ್ಲಿಯೂ ಇದ್ದಾನೆ.

## ರುದ್ರನು ಏಕೆ ಅಭಿಷೇಕ ಪ್ರಿಯ

ರುದ್ರಾಧ್ಯಾಯದ ಮೊದಲನೇ ವಾಕ್ಯವು ರುದ್ರನನ್ನು ಹೀಗೆ ಸ್ತುತಿಸಿದೆ.

ನಮಸ್ತೇ ರುದ್ರ ಮನ್ಯವ
ಉತೋ ತ ಇಷವೇ ನಮಃ ।

–ಎಲೈ ರುದ್ರನೇ ನಿನಗೆ ನಮಸ್ಕಾರ ಮತ್ತು ನಿನ್ನ ಕೋಪಕ್ಕೆ ಹಾಗೂ ನಿನ್ನ ಬಾಣಗಳಿಗೆ ನಮಸ್ಕಾರ. ರುದ್ರನ ಕೋಪವನ್ನು ಶಮನಮಾಡುವುದೇ ರುದ್ರಾಧ್ಯಾಯದ ಮೊದಲನೇ ಕರ್ತವ್ಯವಾಗಿದೆ. ಬ್ರಹ್ಮನ ಕೋಪದಿಂದ ಉದಿಸಿದ ರುದ್ರನು ಸಹಜವಾಗಿಯೇ ಕೋಪಾವಿಷ್ಟನಾದನು. ಹೀಗೆ ಕೋಪಾವಿಷ್ಟನಾದ ರುದ್ರನನ್ನು ಶಾಂತನನ್ನಾಗಿಸುವುದೇ ಅಭಿಷೇಕದ ಮುಖ್ಯೋದ್ದೇಶವಾಗಿರಬಹುದು. ಕೋಪ ಬಂದಾಗ ಮೈ ಬಿಸಿಯಾಗುತ್ತದೆ. ಇದನ್ನು ಆರಿಸಲು ತಣ್ಣೀರಿನ ಸ್ನಾನವನ್ನು ಮಾಡುವುದನ್ನು (ಪ್ರಾಯಶ್ಚಿತ್ತ ರೂಪವಾಗಿ) ನೋಡಿದ್ದೇವೆ. ಬಹುಶಃ ರುದ್ರನ ಕೋಪವನ್ನು ಉಪಶಮನ ಮಾಡಿ ಆತನ ಅನುಗ್ರಹವನ್ನು ಪಡೆಯಬೇಕೆಂಬುದೇ ರುದ್ರಾಭಿಷೇಕದ ಉದ್ದೇಶವಾಗಿರಬೇಕು. 'ಅಭಿಷೇಕ'ವೆಂದರೆ ರುದ್ರನಿಗೆ ಅರ್ಪಿಸುವ

ಒಂದು ಉಪಚಾರವಿಶೇಷ. ಇದರಿಂದ ಆತನು ಅತೀವವಾಗಿ ಸಂತುಷ್ಟನಾಗುತ್ತಾನೆ. ಮನೆಯಲ್ಲಿಯೂ ಸಹ ಸಾಲಿಗ್ರಾಮ ರೂಪಿಯಾದ ರುದ್ರನಿಗೆ ಅಭಿಷೇಕ ಮಾಡುತ್ತೇವೆ.

ಇಲ್ಲಿ ಒಂದು ಪ್ರಶ್ನೆಯು ಉದ್ಭವಿಸಬಹುದು. ಸಕಲ ಕಲ್ಯಾಣಗುಣ ಪರಿಪೂರ್ಣನಾದ ಭಗವಂತನಲ್ಲಿ ಕೋಪವೇಕೆ ಉಂಟಾಯಿತು? ಕೋಪವು ತಾಮಸಗುಣವಲ್ಲವೇ? ಇದಕ್ಕೆ ಉತ್ತರ ಲೋಕರಕ್ಷಣಾರ್ಥವಾಗಿ ಧರ್ಮವೆಂಬ ಕಟ್ಟಲೆಯನ್ನು ಪರಮಾತ್ಮನು ವಿಧಿಸಿದ್ದಾನೆ. ಏಕೆಂದರೆ "ಧರ್ಮೋ ರಕ್ಷತಿ ರಕ್ಷಿತಃ"–ಧರ್ಮವು ಅದನ್ನು ರಕ್ಷಿಸುವವನನ್ನು ಕಾಪಾಡುತ್ತದೆ. ಯಾವಾಗ ನಾವು ಈ ಧರ್ಮಕ್ಕೆ ವಿರುದ್ಧವಾಗಿ ವರ್ತಿಸುವೆವೋ ಆಗ ನಾವು ದೈವದ್ರೋಹಿಗಳಾಗುತ್ತೇವೆ. ಆಗ ಧರ್ಮಸಂಸ್ಥಾಪಕನಾದ ಭಗವಂತನು ಕೋಪಿಸಿಕೊಳ್ಳುವುದು ಸಹಜವಾಗಿಯೇ ಇದೆ. ಆದುದರಿಂದ "ಎಲೈ ರುದ್ರನೇ ನಾನು ಅವಿವೇಕದಿಂದಾಗಿ ತಪ್ಪುಮಾಡಿರಬಹುದು. ನನ್ನನ್ನು ಕ್ಷಮಿಸಿ ನೀನು ಪ್ರಸನ್ನನಾಗು. ಕೋಪ ಮಾಡಬೇಡ" ಎಂದು ಭಕ್ತನು ರುದ್ರನನ್ನು ಇಲ್ಲಿ ಪ್ರಾರ್ಥಿಸುತ್ತಿದ್ದಾನೆ.

ಈ ಅಭಿಷೇಕದ ವಿಧಿವಿಧಾನಗಳು ನಾಲ್ಕು ಬಗೆಯವು.

೧) ರುದ್ರಾಭಿಷೇಕ.
೨) ರುದ್ರೈಕಾದಶಿನೀ.
೩) ಮಹಾರುದ್ರಾಭಿಷೇಕ.
೪) ಅತಿರುದ್ರಾಭಿಷೇಕ.

೧. ರುದ್ರಾಭಿಷೇಕ:– ಮೊದಲು ಬೋಧಾಯನಸೂಕ್ತದ ಪ್ರಕಾರ ಅಂಗನ್ಯಾಸ ಕರನ್ಯಾಸ ಧ್ಯಾನಾದಿಗಳನ್ನು ಮಾಡಬೇಕು. ಇವರಲ್ಲಿಯೂ ಪ್ರಕಾರಗಳಿವೆ.

೧. ಲಘುನ್ಯಾಸ ಮತ್ತು ೨. ಮಹಾನ್ಯಾಸ. ಈವೆರಡರಲ್ಲಿ ಮಹಾನ್ಯಾಸವು ಶ್ರೇಷ್ಠವಾದದ್ದು. ಸಮಯವಿಲ್ಲದಿದ್ದರೆ ಲಘುನ್ಯಾಸ ಮಾಡಬಹುದು. ಆದರೆ ಮುಂದಿನ ಕ್ರಮಗಳಿಗೆ ಮಹಾನ್ಯಾಸವೇ ಅಗತ್ಯ.

ಈಗ ರುದ್ರನ ನಮಕವನ್ನು ಮೊದಲು ಪಠಿಸಿ ಚಮಕದ ೧ ನೇ ಅನುವಾಕವನ್ನು ಪಠಿಸಬೇಕು. ಪುನಃ ನಮಕವನ್ನು ಪಠಿಸಿ ಚಮಕದ ೨ ನೇ ಅನುವಾಕನ್ನು ಪಠಿಸಬೇಕು. ಈ ಕ್ರಮದಲ್ಲಿ ನಮಕವನ್ನು ೧೧ ಬಾರಿ ಪಠಿಸಿ ಚಮಕದ ೧೧ ನೆಯ ಅನುವಾಕವನ್ನು ಪಠಿಸಿದರೆ ಅದು 'ರುದ್ರಾಭಿಷೇಕ'ವಾಗುತ್ತದೆ. ಇದನ್ನೇ ಬೋಧಾಯನ ಸೂಕ್ತದಲ್ಲಿ ಹೀಗೆ ಹೇಳಿದೆ.

ನಮಸ್ತೇ ರುದ್ರ ಮನ್ಯವ ಇತ್ಯೇಕಾದಶಾನುವಾಕಾನಾಂ ಅಗ್ನಾವಿಷ್ಣೂ ಸಜೋಷಸೇತಿ ಏಕೈಕಮನುವಾಕಂ ಏಕಮೇಕಂ ಜಪೇತ್. ತದೇತದ್ರುದ್ರ ವಿಧಾನಂ.

ಈ ಸಂದರ್ಭದಲ್ಲಿ ಧಾರಾಪಾತ್ರೆಯಿಂದ ನೀರು ಸತತವಾಗಿ ಲಿಂಗದಮೇಲೆ ಬೀಳುತ್ತಿರಬೇಕು. ಮನೆಯಲ್ಲಿ ವಸನದ್ವಾರೆಯನ್ನು ಉಪಯೋಗಿಸಬಹುದು.

೨. ರುದ್ರೈಕಾದಶಿನೀ:– (i) ಪೂರ್ವೋಕ್ತ ಕ್ರಮದಂತೆ ೧೧ ಜನ ೧೧ ಸಲ ರುದ್ರವನ್ನು ಪಠಿಸಿದರೆ ಅದು ಒಂದು ರುದ್ರೈಕಾದಶಿನೀ ಆಗುತ್ತದೆ. ಅಥವಾ (ii) ೧೨೧ ಜನ ರುದ್ರವನ್ನು ಒಮ್ಮೆ ಪಠಿಸಿದರೂ ಅದು ರುದ್ರೈಕಾದಶಿನೀ ಆಗುತ್ತದೆ.

೩. ಮಹಾರುದ್ರಾಭಿಷೇಕ:– (i) ೧೧ ಜನ ಪ್ರತಿ ದಿವಸ ೧೧ ಸಲ ರುದ್ರವನ್ನು ಪಠಿಸಬೇಕು. ಹೀಗೆ ೧೧ ದಿವಸ ಪಠಿಸಿದರೆ ಅದು ಒಂದು ಮಹಾರುದ್ರವಾಗುತ್ತದೆ. ಅಥವಾ (ii) ೧೨೧ ಜನ ೧೧ ಆವರ್ತಿ ರುದ್ರವನ್ನು ಪಠಿಸಿದರೆ ಒಂದು ಮಹಾರುದ್ರವಾಗುತ್ತದೆ. ಅಥವಾ (iii) ೧೩೩೧ ಬಾರಿ ರುದ್ರವನ್ನು ಪುನಶ್ಚರಣಮಾಡಿದರೆ ಒಂದು ಮಹಾರುದ್ರವಾಗುತ್ತದೆ.

೪. ಅತಿರುದ್ರಾಭಿಷೇಕ:– (i) ೧೧ ಜನ ಪ್ರತಿನಿತ್ಯ ೧೧ ಬಾರಿ ರುದ್ರವನ್ನು ೧೨೧ ದಿವಸ ಪಠಿಸಿದರೆ ಅದು ಅತಿರುದ್ರವಾಗುತ್ತದೆ. (ii) ಅಥವಾ ೧೩೩೧ ಜನ ೧೧ ಬಾರಿ ರುದ್ರವನ್ನು ಪಠಿಸಿದರೂ ಒಂದು ಅತಿರುದ್ರವಾಗುತ್ತದೆ. ಅಥವಾ (iii) ೧೪೬೪೧ ಬಾರಿ ರುದ್ರವನ್ನು ಒಬ್ಬ ವ್ಯಕ್ತಿ ಪಠಿಸಿದರೂ ಅದು ಒಂದು ಅತಿರುದ್ರವಾಗುವುದು.

ಮೇಲೆ ಹೇಳಿದ ಕ್ರಮವೆಲ್ಲವೂ ವಿಶೇಷ ದಿವಸಗಳಲ್ಲಿ ವಿಶೇಷ ಸಂದರ್ಭಗಳಲ್ಲಿ ಆಚರಿಸತಕ್ಕಂತಹುದು. ಒಮ್ಮೆ ರುದ್ರ ಒಮ್ಮೆ ಚಮಕ ಹೇಳಿ ಅಭಿಷೇಕ ಮಾಡಿದರೆ ಅದು ಏಕವಾರ ರುದ್ರಾಭಿಷೇಕವಾಗುತ್ತದೆ.

ರುದ್ರ ಪುನಶ್ಚರಣ ವಿಧಿ:– ಭಸ್ಮಧಾರಣೆ ಮಾಡಿಕೊಂಡು ತದೇಕ ಚಿತ್ತದಿಂದ ರುದ್ರವನ್ನು ಪಠಿಸಿದರೆ ಅವನ ಬಳಿ ಪಾಪಗಳು ಸುಳಿಯಲಾರವು. ನಿತ್ಯ ರುದ್ರಜಪಾನುಷ್ಠಾನ ಮಾಡಿದರೆ ಶಿವನ ಕೃಪೆಯಿಂದ ಪರಮಾನಂದವನ್ನು ಪಡೆಯುವುದೇ ಅಲ್ಲದೆ ಮೋಕ್ಷ ಸಾಮ್ರಾಜ್ಯವನ್ನೂ ಹೊಂದುತ್ತಾನೆ.

ಶತರುದ್ರೀಯವನ್ನು ಪಠಿಸುವವನು ಎಲ್ಲ ಪಾಪಗಳಿಂದ ಮುಕ್ತನಾಗಿ ಶುದ್ಧಾತ್ಮನಾಗುತ್ತಾನೆಂದು ಕೈವಲ್ಯೋಪನಿಷತ್ತಿನಲ್ಲಿ ತಿಳಿಸಿದೆ. ನಮಕ, ಚಮಕ ಮತ್ತು ಪುರುಷ ಸೂಕ್ತ ಮಂತ್ರಗಳನ್ನು ಪಠಿಸಿದರೆ ಬ್ರಹ್ಮಲೋಕವನ್ನು ಪಡೆದು ಆನಂದವನ್ನನುಭವಿಸುವನೆಂದು ಸ್ಮೃತಿಗಳು ಘೋಷಿಸಿವೆ.

ಭೂ, ಕನಕ, ವಜ್ರ ವೈಢೂರ್ಯಗಳನ್ನು ದಾನಮಾಡಿದ ವಿಪುಲ ಪುಣ್ಯಕ್ಕಿಂತ ಶಿವನನ್ನು ಧ್ಯಾನಿಸಿ ಮಾಡುವ ಅರ್ಚನೆಯಿಂದ ಅಧಿಕ ಪುಣ್ಯ ಲಭಿಸುತ್ತದೆಂದು ವಾಯು ಪುರಾಣದಲ್ಲಿ ಹೇಳಿದೆ.

ರುದ್ರಾಭಿಷೇಕವಾದ ನಂತರ ರುದ್ರಕ್ರಮಾರ್ಚನೆ, ರುದ್ರತ್ರಿಶತಿಗಳಿಂದ ರುದ್ರನನ್ನು ಅರ್ಚಿಸಿ ಮಹಾಮಂಗಳಾರತಿಯನ್ನು ಬೆಳಗಬೇಕು. ಇಹದಲ್ಲಿಯೂ ಸಂದು ಪರದಲ್ಲೂ ಸಲ್ಲಲು ರುದ್ರನ ಅರ್ಚನೆಯೊಂದೇ ಜೀವರಿಗೆ ದಾರಿ.



## ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

### ಗರುಡಾದ್ರಿನಗರ ಕಾಟೇಜುಗಳು

ಪ್ರತಿ ಅಂತಸ್ತಿನಲ್ಲೂ 4 ಸೂಟ್‌ಗಳಿರುವಂತೆ ಎರಡು ಅಂತಸ್ತುಗಳ 18 ಕಾಟೇಜುಗಳನ್ನು ತಿ.ತಿ.ದೇ. ನಿರ್ಮಿಸುತ್ತಿದೆ.

* ಪ್ರತಿ ಸೂಟ್ ಸಹ 10'×12' ಗಳ ಒಂದು ಕೋಣೆ ಹಾಗೂ ಹೊಂದಿಕೊಂಡ ಶೌಚಗೃಹ, ಸಾಮಾನ್ಯ ವೆರಾಂಡಾವನ್ನು ಹೊಂದಿರುತ್ತದೆ.
* 30000 ರೂಗಳ ದಾನದಿಂದ ಒಬ್ಬರು 320 ಚದರಡಿ ಪ್ಲಿಂತ್ ಏರಿಯಾದ ಒಂದು ಸೂಟನ್ನು ತಮ್ಮ ಹೆಸರಿನಲ್ಲಿ ಕಟ್ಟಿಸಬಹುದು. ಅಪೇಕ್ಷೆಪಟ್ಟಲ್ಲಿ 8 ಸೂಟ್‌ಗಳ ಇಡೀ ಕಾಟೇಜನ್ನು 2.4 ಲಕ್ಷ ರೂಗಳ ದಾನದ ಮೂಲಕ ಅಥವಾ 4 ಸೂಟ್‌ಗಳನ್ನು 1.2 ಲಕ್ಷ ರೂಗಳ ದಾನದ ಮೂಲಕ ಅಥವಾ 60000 ರೂಗಳ ದಾನದ ಮೂಲಕ 2 ಸೂಟ್‌ಗಳನ್ನು ನಿರ್ಮಿಸಬಹುದು.

### ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

### ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

### ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಿಡಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಸೆಳೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ವಾರ್ತಾಲಹರಿ

## ಹೊಸ ಸದಸ್ಯರ ಪ್ರಮಾಣ ವಚನಸ್ವೀಕಾರ

ತಿರುಮಲೆಯ ಶ್ರೀ ವೆಂಕಟೇಶ್ವರಾಲಯದಲ್ಲಿ ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ಅವರ ಅಧ್ಯಕ್ಷತೆಯಲ್ಲಿ ಅಕ್ಟೋಬರ್ 25 ರಂದು ಬೋರ್ಡ್‌ನ ಹೊಸ ಸದಸ್ಯರುಗಳಾದ ಆಂಧ್ರಪ್ರದೇಶ ಶಾಸನಸಭೆಯ ನಗರಿಯ ಪ್ರತಿನಿಧಿ ಶ್ರೀ ಉಂಡ್ರುಕೃಷ್ಣಾ ರಾವು ಹಾಗೂ ಶಾಸನ ಸಭೆಯ ಟೆಕ್ಕಲಿಯ ಪ್ರತಿನಿಧಿ ಶ್ರೀಮತಿ ವರದಾ ಸರೋಜ ಅವರುಗಳು ಶ್ರೀನಿವಾಸನ ಸೇವೆಯ ಪ್ರಮಾಣ ವಚನವನ್ನು ಸ್ವೀಕರಿಸಿದರು. ಸ್ವಾಮಿ ಸನ್ನಿಧಿಯಲ್ಲಿ ಈ ಹೊಸ ಸದಸ್ಯರಿಗೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು ಪ್ರಮಾಣ ವಚನವನ್ನು ನೀಡಿದರು.

ಅಂದು ಸಂಜೆ ಬೋರ್ಡ್ ಅಧ್ಯಕ್ಷ ಶ್ರೀ ಸೀತಾರಾಮಯ್ಯನವರು, ಆಡಳಿತನಿರ್ವಾಹಕಮಂಡಳಿಯ ಸದಸ್ಯರೊಡನೆಯೂ, ಕಾರ್ಯನಿರ್ವಹಣಾಧಿಕಾರಿ ಸಹಕಾರ್ಯನಿರ್ವಹಣಾಧಿಕಾರಿ ಹಾಗೂ ಇಂಜನಿಯರುಗಳೊಡನೆ ಸೇರಿ ಕ್ಯೂಕಾಂಪ್ಲೆಕ್ಸ್, ನಿರ್ಮಾಣದ ಕಡೆಯ ಹಂತದಲ್ಲಿನ ರಾಮಬಗೀಚ ಅತಿಥಿಗೃಹಗಳು, ಕಲ್ಯಾಣಕಟ್ಟೆ, ಮೊದಲಾದವುಗಳನ್ನೂ ನಿರ್ಮಿಸಲ್ಪಡುತ್ತಿರುವ ತಿರುಮಲೆಯ ಹೊಸ ಬಸ್‌ಸ್ಟಾಂಡ್, ಪಾಪನಾಶನಂ ಆಣೆಕಟ್ಟೆ ಹಾಗೂ ನಾರಾಯಣಗಿರಿಯ ಧರ್ಮಪ್ರಚಾರ ಪರಿಷತ್ ಪ್ರದೇಶಗಳನ್ನೂ ಸಂದರ್ಶಿಸಿದರು

## ಕ್ಷಾಮನಿವಾರಣೆಗಾಗಿ ೫೦ ಲಕ್ಷ ರೂಗಳ ವಂತಿಗೆ

ಹೊಸದಾಗಿ ನಿಯಮಿತವಾದ ತಿ. ತಿ. ದೇ. ಧರ್ಮಕರ್ತರ ಮಂಡಳಿಯು ಆಂಧ್ರಪ್ರದೇಶದ ಬರ ಪರಿಹಾರಕ್ಕಾಗಿ, ಮುಖ್ಯಮಂತ್ರಿಗಳ ಬರ ಪರಿಹಾರನಿಧಿಗೆ 50 ಲಕ್ಷ ರೂಗಳನ್ನು ತಿ. ತಿ. ದೇ. ವಂತಿಗೆಯಾಗಿ ನೀಡಲು ತೀರ್ಮಾನಿಸಿದೆ.

ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಈ ಮುಂಚಿನ ಅತಿಗಣ್ಯವಕ್ತಿಗಳ ಉಚಿತ ಶೀಘ್ರ ದರ್ಶನದ ಪಾಸುಗಳನ್ನು ನೀಡುವ ಪದ್ಧತಿಯನ್ನು ಕೈಬಿಡಲೂ ಧರ್ಮಕರ್ತರ ಮಂಡಳಿ ತೀರ್ಮಾನಿಸಿದೆ.

ಅರ್ಜಿತ ಸೇವೆಗಳನ್ನು ತಗ್ಗಿಸಿ ಅತಿಹೆಚ್ಚು ಕಾಲಾವಕಾಶವನ್ನು ಧರ್ಮದರ್ಶನಕ್ಕೆ ನೀಡುವ ಉಪಾಯಗಳನ್ನು ಪರಿಶೀಲಿಸಲಾಗುತ್ತಿದೆಯೆಂದು ವರದಿಯಾಗಿದೆ.

## ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಪತಿಯ ಹೊರಗಡೆ ತಿರುಚಾನೂರು, ನರಸಿಂಗಾಪುರಂ, ಅಕ್ಕಾರಾಂಪಲ್ಲಿ, ಶ್ರೀನಿವಾಸ ಮಂಗಾಪುರ ಮೊದಲಾದ ಕಡೆ ಕೆಲಸ ಮಾಡುತ್ತಲಿರುವ ತಿ. ತಿ. ದೇ. ಉದ್ಯೋಗಿಗಳಿಗೂ ತಿರುಪತಿಯ ಉದ್ಯೋಗಿಗಳಿಗೆ ನೀಡುವಂತೆಯೇ ಮನೆಬಾಡಿಗೆ ಭತ್ಯ, ಯಾತ್ರಿಕ ಭತ್ಯವನ್ನು ಸರ್ಕಾರದ ಅನುಮೋದನೆಯ ಶರತ್ತಿನೊಂದಿಗೆ ನೀಡಲು ತೀರ್ಮಾನಿಸಲಾಯಿತು.

* * * *

ತಿ. ತಿ ದೇ. ಗಳ ಶ್ರೀ ಗೋವಿಂದರಾಜಸ್ವಾಮಿ ಕಲಾಶಾಲೆಯ ಉದ್ಯೋಗಿಯ 13 ವರ್ಷ ಹೆಣ್ಣುಮಗುವಿಗೆ ಹೃದಯ ಶಸ್ತ್ರಚಿಕಿತ್ಸೆಯನ್ನು ಮದರಾಸಿನ ಜನರಲ್ ಆಸ್ಪತ್ರೆಯಲ್ಲಿ ನಡೆಸಲು ವೆಚ್ಚಗಳಿಗಾಗಿ ರೂ. 3,000/– ಗಳನ್ನು ಮಂಜೂರುಮಾಡುತ್ತ, ತಿ. ತಿ. ದೇ. ಉದ್ಯೋಗಿಗಳು ಮದರಾಸು ಅಥವಾ ವೆಲ್ಲೂರುಗಳಲ್ಲಿ ಚಿಕಿತ್ಸೆ ಪಡೆಯುವುದನ್ನು (ತಿ. ತಿ. ದೇ ವೈದ್ಯಕೀಯ ಪ್ರಮಾಣಪತ್ರದೊಡನೆ) ಅನುಮತಿಸಬೇಕೆಂದು ಸರ್ಕಾರಕ್ಕೆ ಬರೆಯಲು ತೀರ್ಮಾನಿಸಲಾಯಿತು.

* * * *

ಆಂಧ್ರಪ್ರದೇಶದಲ್ಲಿನ ಬರ ಪರಿಹಾರಕ್ಕಾಗಿ ಮುಖ್ಯಮಂತ್ರಿಗಳ ಪರಿಹಾರನಿಧಿಗೆ 50 ಲಕ್ಷ ರೂ. ಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* * * *

ತಿರುಮಲೆಯಲ್ಲಿ ಸ್ವಾಮಿ ಪ್ರಸಾದವಾದ ಲಡ್ಡುವನ್ನು ಇಡಲು ಆನಂದ ನಿಲಯದ ಮುದ್ರೆಯಿರುವ ಪಾಲಿಥಿನ್ ಚೀಲಗಳಿಗಾಗಿ ವರ್ಷಕ್ಕೆ 10 ಲಕ್ಷ ರೂ.ಗಳನ್ನು (ಲಾಡುವನ್ನು ಚೀಲದಲ್ಲಿಟ್ಟು ಬಿಗಿಸುವ ಶುಲ್ಕವೂ ಸೇರಿದಂತೆ) ಮಂಜೂರು ಮಾಡಲಾಯಿತು.

* * * *

ತಿರುಮಲೆಯಲ್ಲಿನ ತಿ. ತಿ ದೇ. ಅಂಗಡಿಗಳು, ಬಂಕುಗಳ ಬಾಡಿಗೆಯ ಹೊಸ ದರಗಳನ್ನು 1–4–83 ರಿಂದ ಅಮಲಿಗೆ ಬರುವಂತೆ ತೀರ್ಮಾನಿಸಲಾಯಿತು.

* * * *

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಕ್ಕೆ ಅತಿಗಣ್ಯವ್ಯಕ್ತಿಗಳ ಪ್ರವೇಶದ ಪಾಸುಗಳ ಪದ್ಧತಿಯನ್ನು ಕೈಬಿಡಲು ತಿ. ತಿ. ದೇ. ಧರ್ಮಕರ್ತರ ಮಂಡಳಿಗೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

## ಅಜ್ಞಾತ ಭಕ್ತರ ಕಾಣಿಕೆಗಳು

ಅಕ್ಟೋಬರ್ 21 ರಂದು ಅಜ್ಞಾತ ಭಕ್ತರೊಬ್ಬರು ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಹುಂಡಿಯಲ್ಲಿ ಒಂದು ಲಕ್ಷ ರೂಗಳ ಕಾಣಿಕೆಯನ್ನು ಸಲ್ಲಿಸಿದ್ದುದು ಕಂಡುಬಂದಿತು. ವೃತ್ತಪತ್ರಿಕೆಯಲ್ಲಿ ಸುತ್ತಿಡಲಾಗಿದ್ದ ನೂರು ರೂಗಳ ನೂರು ನೋಟುಗಳಂತೆ ಕಟ್ಟಿದ ಹತ್ತು ಕಟ್ಟುಗಳು ಇವು ಎಂದು ವರದಿಯಾಗಿದೆ. ಎರಡು ದಿನಗಳ ನಂತರ ಮತ್ತೊಬ್ಬರು 1 ಲಕ್ಷ 30 ಸಾವಿರ ರೂ. ಗಳನ್ನು 13 ಕಟ್ಟುಗಳಲ್ಲಿ ಸಮರ್ಪಿಸಿದರು. ಅಕ್ಟೋಬರ್ 24 ರಂದು ಒಂದು ಲಕ್ಷ ರೂಗಳು ಕಂಡು ಬಂದುವು. ಹೀಗೆ ಅಕ್ಟೋಬರ್ ತಿಂಗಳಿನಲ್ಲಿ ಮೂರುಬಾರಿ ಲಕ್ಷ ರೂಗಳ ಸ್ತರದಲ್ಲಿ ಕಾಣಿಕೆಗಳನ್ನು ಸಲ್ಲಿಸಲಾಗಿದೆ ಎಂದು ವರದಿಯಾಗಿದೆ.

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಹೊಸ ಜನಗಣಕ ಯಂತ್ರ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಬಂಗಾರದ ಬಾಗಿಲಿನ ಬಳಿ ಹೊಸದಾದ ಗಣಕ ಯಂತ್ರವನ್ನು ಇಡಲಾಗಿದೆ. ಬೆಂಗಳೂರಿನ ಎಂ. ಓ. ಎಂ. ಅಂಡ್ ಡಿ ಎ. ಡಿ. ಅಸೋಸಿಯೇಟ್ಸ್ ಎಲೆಕ್ಟ್ರಾನಿಕ್ಸ್ ಕಂಪನಿಯಿಂದ ನಾಲ್ಕು ಸಾವಿರದಿನ್ನೂರು ರೂಗಳಿಗೆ ಕೊಂಡ ಈ ಯಂತ್ರವು ಎಷ್ಟು ಮಂದಿ ಯಾತ್ರಿಕರು ದರ್ಶನ ಪಡೆದರು ಎಂಬುದನ್ನೂ ಬಂಗಾರದ ಬಾಗಿಲ ಬಳಿಯಲ್ಲಿ ತೋರಿಸುವುದು.

## ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆ

# ಭಕ್ತರಲ್ಲಿ ಒಂದು ವಿನಂತಿ

ತಿರುಮಲೆಗೆ ಬರುವ ಯಾತ್ರಿಕರ ಭೋಜನ ಸೌಕರ್ಯಕ್ಕಾಗಿ ಭಕ್ತರ ಉದಾರ ಧನ ಸಹಾಯದ ನೆರವಿನಿಂದ ಒಂದೂವರೆ ವರ್ಷದ ಹಿಂದೆ ತಿ. ತಿ. ದೇವಸ್ಥಾನಗಳು ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಯನ್ನು ಆರಂಭಿಸಿದ್ದು, ಯಾತ್ರಿಕರಲ್ಲಿ ಬಹುಬೇಗ ಜನಪ್ರಿಯವಾಗಿ, ಇದಕ್ಕಾಗಿ ನೀಡಲಾಗಿರುವ ದತ್ತಿನಿಧಿಯು ಮೊತ್ತ ಒಂದು ಕೋಟಿ ರೂಗಳಿಗೂ ಹೆಚ್ಚಾಗಿದೆ. ಒಂದು ವರ್ಷದಿಂದ ತಿ. ತಿ ದೇವಸ್ಥಾನಗಳು ಪ್ರತಿ ನಿತ್ಯ ಹತ್ತು ಸಾವಿರ ಮಂದಿ ಯಾತ್ರಿಕರಿಗೆ ಉಚಿತ ಭೋಜನ ಸೌಕರ್ಯವನ್ನು ನೀಡುತ್ತಿದೆ.

ಈ ಭವ್ಯವಾದ ಯೋಜನೆಯ ಅನುಬಂಧದಂತೆ ಅಡಿಗೆಯನ್ನು ಮಾಡಿ ಬಡಿಸುವ ಸೇವಾವಕಾಶವನ್ನು ಯಾತ್ರಿಕರಿಗೇ ವಿಸ್ತರಿಸುವ ಯೋಜನೆಯನ್ನು ಏಟುಮಾಡಲು ತಿ. ತಿ. ದೇವಸ್ಥಾನಗಳು ಅಪೇಕ್ಷಿಸುತ್ತದೆ. ಈ ಮೂಲಕವಾಗಿ ಧನ ದಾನ ನೀಡದೆಯೇ ಭಕ್ತರು ಯಾತ್ರಿಕ ಸೌಕರ್ಯಾಭಿವೃದ್ಧಿಯಲ್ಲಿ ಭಾಗವಹಿಸಿದಂತಾಗುತ್ತದೆ.

ತಿರುಮಲೆಯ ಕ್ಯಾಂಟೀನ್ ಕಾಂಪ್ಲೆಕ್ಸ್ ಭವನದಲ್ಲಿ ಯಾತ್ರಿಕರಿಗೆ ದಿನವೂ ಬೆಳಗ್ಗೆ 9 ರಿಂದ ಮಧ್ಯಾಹ್ನ 3 ರ ವರೆಗೆ ಹಾಗೂ ರಾತ್ರಿ 7 ರಿಂದ 11 ರ ವರೆಗೆ ಉಚಿತ ಭೋಜನ ನೀಡಲಾಗುತ್ತದೆ. ಈ ಉದಾತ್ತ ಯೋಜನೆಯಲ್ಲಿ ಸೇವೆ ಸಲ್ಲಿಸ ಬಯಸುವ ಭಕ್ತರು ತಿರುಮಲೆಯ ಅನ್ನದಾನ ಸ್ಕೀಮ್‌ನ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ ಅವರನ್ನು ಕಂಡು ತಮ್ಮ ಸೇವೆಯ ದಿನ ಹಾಗೂ ಕಾಲಗಳನ್ನೂ ಸೂಚಿಸ ಬಹುದು. ಇಂತಹ ಸ್ವಯಂ ಸೇವಕರು ತಮ್ಮ ಸೇವಾಕಾಲಕ್ಕೆ ಅರ್ಧಗಂಟೆ ಮೊದಲು ದಯವಿಟ್ಟು ಕ್ಯಾಂಟಿನ್ ಕಾಂಪ್ಲೆಕ್ಸ್‌ನಲ್ಲಿರಬೇಕೆಂದು ಸೂಚಿಸಲಾಗಿದೆ. ಮೊದಲೇ ತಿಳಿಸದೆ, ಸ್ಥಳದಲ್ಲೇ ಸೇವೆ ನೀಡಲು ಸಿದ್ಧರಿರುವಂತಹವರಿಗೂ ಸ್ವಾಗತವಿದೆ. ನಿಮ್ಮ ಸಹಯಾತ್ರಿಕರಿಗಾಗಿ ನಿಮ್ಮ ಸೇವೆಯನ್ನು ತಿ. ತಿ. ದೇವಸ್ಥಾನಗಳು ಕೃತಜ್ಞತೆಯಿಂದ ಸ್ವೀಕರಿಸುತ್ತದೆ.

**ಯಾತ್ರಿಕರಿಗೆ ಊಟ ಬಡಿಸುವುದರಿಂದ**
**ದೇವರಿಗೆ ಸೇವೆ ಸಲ್ಲಿಸಿರಿ.**

**ನಿಮ್ಮ ಯಾತ್ರೆಯನ್ನು ಮತ್ತಷ್ಟು**
**ಸಫಲಗೊಳಿಸಿಕೊಳ್ಳಿರಿ.**

## ತಿರುಪತಿಯಿಂದ ರಾಮೇಶ್ವರಕ್ಕೆ ಬಸ್ ಸೌಲಭ್ಯ

ತಿರುಪತಿಯಿಂದ ರಾಮೇಶ್ವರಕ್ಕೆ ಹಾಗ
ರಾಮೇಶ್ವರದಿಂದ ತಿರುಪತಿಗೆ ಪ್ರತಿನಿತ್ಯ ಹೋ
ಬರುವ ಬಸ್ ವ್ಯವಸ್ಥೆಯನ್ನು ಅಕ್ಟೋಬ
ತಿಂಗಳ ಕೊನೆಯವಾರದಲ್ಲಿ ಆಂಧ್ರಪ್ರದೇಶ ರ
ಸಾರಿಗೆ ಸಂಸ್ಥೆಯ ಛೇರ್ಮನ್ ಶ್ರೀ ಆರ್
ಕೋಟಯ್ಯ ಅವರು ಉದ್ಘಾಟಿಸಿದರು. ತಿರುಪ
ಯನ್ನು ಮಧ್ಯಾಹ್ನ 3 ಗಂಟೆಗೆ ಬಿಟ್ಟು, 17 ಗಂ
ಗಳಲ್ಲಿ 740 ಕಿ. ಮೀ. ಪ್ರಯಾಣವಾ
ಮಾರನೆಯ ದಿನ ಬೆಳಗ್ಗೆ 8 30ಕ್ಕೆ ರಾಮೇಶ್
ವನ್ನು ಸೇರುವುದು. ಹೀಗೆಯೇ ಅಲ್ಲಿಂ
ಮಧ್ಯಾಹ್ನ 3 30 ಕ್ಕೆ ಹೊರಟ ಬಸ್ ಮಾರನೆ
ದಿನ ಬೆಳಗ್ಗೆ 8.30 ಕ್ಕೆ ತಿರುಪತಿ ಸೇರುವುದ
ಇಷ್ಟು ದೂರ ಪ್ರಯಾಣ ಆಂಧ್ರಪ್ರದೇಶ ರ
ಸಾರಿಗೆಯಲ್ಲಿ ಇದೇ ಪ್ರಥಮವೆಂದು ಅವ
ತಿಳಿಸಿದರು. ಇದರಿಂದಾಗಿ ತಿರುಪತಿಯಿಂ
ರಾಮೇಶ್ವರಕ್ಕೆ ಹೋಗುವ ಯಾತ್ರಾರ್ಥಿಗಳ
ಅನುಕೂಲ ಹೆಚ್ಚುವುದೆಂದು ಭಾವಿಸಲಾಗಿದೆ.

ತಿರುಪತಿಯ ರಸ್ತೆ ಸಾರಿಗೆ ಸಂಸ್ಥೆಯ ಬ
ನಿಲ್ದಾಣದಲ್ಲಿ ಏಳು ಹೊಸ ಫ್ಲಾಟ್‌ಫಾ
ಗಳನ್ನೂ ಶ್ರೀ ಆರ್.ಟಿ ಕೋಟಯ್ಯ ಅವ
ಉದ್ಘಾಟಿಸಿದರು ಇದರಿಂದಾಗಿ ಇಲ್ಲಿನ ಒ
ಫ್ಲಾಟ್‌ಫಾರಂಗಳ ಸಂಖ್ಯೆ ಹದಿನೆಂಟಾದರ
ಇವೂ ಸಾಲವೆಂದೂ ಮತ್ತೂ ಹಲವು ಫ್ಲಾ
ಫಾರಂಗಳನ್ನು ನಿರ್ಮಿಸಲಿರುವುದಾಗಿಯೂ
ಸುತ್ತ ಶ್ರೀಯುತರು, ಇನ್ನೆರಡು ವರ್ಷ
ಆಂಧ್ರಪ್ರದೇಶದ ಎಲ್ಲ ಜಿಲ್ಲಾ ಕೇಂದ್ರಗಳಿ
ತಿರುಮಲೆಗೆ ನೇರ ಬಸ್‌ಗಳನ್ನು ನಡೆಸು
ದಾಗಿಯೂ ತಿಳಿಸಿದರು.

## ವೈಭವದ ಪುಷ್ಪಯಾಗ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿದೇ
ಲಯದಲ್ಲಿ ಪ್ರತಿವರ್ಷದಂತೆ ಈ ವರ್ಷವೂ ವಾ
ಪುಷ್ಪಯಾಗವು ಅತಿ ಸಡಗರದಿಂದ ನಡೆಯಿ
ಸ್ವಾಮಿಯ ಉತ್ಸವ ಮೂರ್ತಿಯನ್ನು ವಿ
ಬಗೆಯ ಹೂವುಗಳಿಂದ ಅಲಂಕರಿಸಿ ಅಸಂ
ಪರಿಮಳ ಪುಷ್ಪಗಳಿಂದ ಆರಾಧಿಸುವ ಈ ವಾಷಿ
ಪುಷ್ಪಯಾಗವನ್ನು ಹಲವಾರು ಗೃಹಸ್ಥ
ಅರ್ಜಿತ ಸೇವೆಯನ್ನಾಗಿಯೂ ಮಾಡಿ ಕೊಂ
ಆರಾಧನೆಯಲ್ಲಿ ಪಾಲುಗೊಂಡಿದ್ದರು. 3500
ಗಳ ಶುಲ್ಕದಿಂದ ಐದುಮಂದಿಯ ಕುಟುಂಬ ಪಾ
ಗೊಳ್ಳ ಬಹುದಾದ ಪುಷ್ಪಯಾಗದ ಅರ್ಜಿತ ಸೆ
ಯಲ್ಲಿ ಗೃಹಸ್ಥರಿಗೆ ಐದು ಗ್ರಾಂಗಳ ಸ್ವಾಮಿ
ಬಂಗಾರದ ಪದಕವನ್ನೂ, ವಸ್ತ್ರವನ್ನೂ ಬ
ಮಾನವಾಗಿ ನೀಡಲಾಗುತ್ತದೆ.

## ಕಾಗಿನೆಲೆಯಲ್ಲಿ ಕನಕದಾಸರ ಜಯಂತಿ ಉತ್ಸವ

ಬೆಂಗಳೂರಿನ ಮಾಗಡಿ ರಸ್ತೆಯಲ್ಲಿರುವ ಶ್ರೀ ಗುರು ರಾಘವೇಂದ್ರ ಸ್ವಾಮಿ ಟ್ರಸ್ಟ್, ಶ್ರೀಕನಕ ಸಮಿತಿ ಟ್ರಸ್ಟ್ (ಕಾಗಿನೆಲೆ) ಹಾಗೂ ತಿ. ತಿ. ದೇ. ಗಳ ದಾಸಸಾಹಿತ್ಯ ವಿಭಾಗ – ಇವರುಗಳ ಸಂಯುಕ್ತ ಆಶ್ರಯದಲ್ಲಿ ಇದೇ ನವಂಬರ್ 22 ಮತ್ತು 23 ರಂದು ದಾಸಶ್ರೇಷ್ಠ ಶ್ರೀ ಕನಕದಾಸರ ಜಯಂತ್ಯುತ್ಸವವನ್ನು ದಾಸರ ಆರಾಧ್ಯ ದೈವ ಕಾಗಿನೆಲೆಯ ಶ್ರೀ ಆದಿಕೇಶವಸ್ವಾಮಿ ದೇವಾಲಯದಲ್ಲಿ ಅತ್ಯಂತ ವಿಜೃಂಭಣೆಯಿಂದ ನಡೆಸಲಾಗುವುದು. ನಾಡಿನ ಹಿರಿಯ ಕಿರಿಯ ಸಂಗೀತ ವಿದ್ವಾಂಸರುಗಳು, ಹರಿಕಥಾ ಕೀರ್ತನಕಾರರು, ದಾಸಸಾಹಿತ್ಯ ಪ್ರಚಾರಕರೂ ಈ ಉತ್ಸವದಲ್ಲಿ ಪಾಲ್ಗೊಂಡು ತಮ್ಮ ಸಾಹಿತ್ಯ ಕಲಾಸೇವೆಯ ಮೂಲಕ ಶ್ರದ್ಧಾಂಜಲಿ ಅರ್ಪಿಸುವರು.

"ಹರಿಕಥಾಮೃತಸಾರ" ಪುಸ್ತಕ ಪ್ರಕಟನೆಯನ್ನೂ ಮಾಡುವ ನಿರೀಕ್ಷೆಯಿದ್ದು, ಕರ್ನಾಟಕ ರಾಜ್ಯದ ಮಂತ್ರಿಗಳಾದ ಶ್ರೀ. ಎಚ್. ಡಿ. ದೇವೇಗೌಡ ಅವರು (ಲೋಕೋಪಯೋಗಿ–ನೀರಾವರಿ ಸಚಿವರು) ಸಮಾರೋಪ ಭಾಷಣ ನೀಡುವವರಿದ್ದಾರೆ. ಪುಸ್ತಕವನ್ನು ಶ್ರೀ ಎಸ್. ಆರ್. ಬೊಮ್ಮಾಯಿ (ಕಂದಾಯ ಸಚಿವರು) ಬಿಡುಗಡೆ ಮಾಡಲಿದ್ದಾರೆ. ಈ ಉತ್ಸವಗಳಲ್ಲಿ ಶ್ರೀ ವ್ಯಾಸರಾಜಮಠದ ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥರೂ ಪಾಲುಗೊಳ್ಳುವರೆಂದು ನಿರೀಕ್ಷಿಸಲಾಗಿದೆ.

## ಕರ್ಜಗಿಯಲ್ಲಿ ಶ್ರೀದವಿಠಲರ ಸಂಸ್ಮರಣೋತ್ಸವ

ಕರ್ಜಗಿಯ ಶ್ರೀ ಪಾಂಡುರಂಗ ದೇವಸ್ಥಾನ ಸೇವಾಸಮಿತಿ ಹಾಗೂ ತಿ. ತಿ. ದೇ. ದಾಸ ಸಾಹಿತ್ಯ ಪ್ರಾಜೆಕ್ಟ್ ಸಂಯುಕ್ತ ಆಶ್ರಯದಲ್ಲಿ ಕರ್ಜಗಿಯಲ್ಲಿನ ಶ್ರೀ ಪಾಂಡುರಂಗ ದೇವರ ರಥೋತ್ಸವ ಸಂದರ್ಭದಲ್ಲಿ ಶ್ರೀ ಶ್ರೀದವಿಠಲರ ಸಂಸ್ಮರಣೋತ್ಸವವನ್ನು ಏರ್ಪಡಿಸಲಾಗಿದ್ದು, ಹರಿಕಥೆ, ಉಪನ್ಯಾಸ ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ.

## ಡಾ|| ದಿವಾಕರ್ಲ ವೆಂಕಟಾವಧಾನಿ ನಿಧನ

ತೆಲುಗಿನ ಪ್ರಖ್ಯಾತ ಕವಿ, ವಿದ್ವಾಂಸ, ವಿಮರ್ಶಕ, ಉಪನ್ಯಾಸಕ, ಪ್ರಾಚಾರ್ಯ ಡಾ|| ದಿವಾಕರ್ಲ ವೆಂಕಟಾವಧಾನಿ ಅವರು ದಿವಂಗತರಾದರೆಂದು ತಿಳಿಸಲು ವಿಷಾದವಾಗುತ್ತದೆ.

ಆಂಧ್ರದಿಂದ ಬೊಂಬಾಯಿಗೆ ತಮ್ಮ ಕುಟುಂಬ ಸಹಿತರಾಗಿ ಬಂದಿದ್ದ ಡಾ|| ಅವಧಾನಿ ಅವರು ಮೂತ್ರಪಿಂಡಗಳ ತೊಂದರೆಯಿಂದಾಗಿ ಆಸ್ಪತ್ರೆಗೆ ಸೇರಿ, ಶಸ್ತ್ರ ಚಿಕಿತ್ಸೆಯಾದ ನಂತರ ಅಕ್ಟೋಬರ್ 21 ರ ರಾತ್ರಿ ನಿಧನರಾದರು.

73 ವರ್ಷದ ಈ ಜ್ಞಾನವೃದ್ಧರು-ಪತ್ನಿ, ಇಬ್ಬರು ಗಂಡುಮಕ್ಕಳು, ಐದುಮಂದಿ ಹೆಣ್ಣುಮಕ್ಕಳು ಹಾಗೂ ಅಸಂಖ್ಯ ಅಭಿಮಾನಿ, ಶಿಷ್ಯರನ್ನು ಬಿಟ್ಟು ಹೋಗಿದ್ದಾರೆ.

ಪಶ್ಚಿಮ ಗೋದಾವರಿ ಜಿಲ್ಲೆಯ ಭೀಮವರಂನ ಎಂಡಗಂಡಿ ಗ್ರಾಮದಲ್ಲಿ 1913 ರ ಜೂನ್ 29 ರಂದು ಜನಿಸಿದ ಶ್ರೀ ದಿವಾಕರ್ಲ ವೆಂಕಟಾವಧಾನಿ ಅವರು ತಿರುಪತಿ ವೆಂಕಟಕವಿಗಳ ವಾರಸರಾಗಿ ಸಂಸ್ಕೃತಾಂಧ್ರಾಂಗ್ಲಗಳನ್ನು ಮೈಗೂಡಿಸಿ ಕೊಂಡು, ಎಂ. ಎ. ಮುಗಿಸಿದ ಬಳಿಕ ವಿಶಾಖಪಟ್ಟಣದಲ್ಲಿ 17 ವರ್ಷ ಅಧ್ಯಾಪಕರಾಗಿದ್ದು, ನಂತರ ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕರಾಗಿ, ಅಲ್ಲಿನ ತೆಲುಗು ವಿಭಾಗಾಧ್ಯಕ್ಷರಾಗಿ, ಪ್ರಾಚಾರ್ಯರಾಗಿ ನಿವೃತ್ತರಾದರು.

ಅವರು ನೂರಕ್ಕೂ ಮಿಕ್ಕಿದ ಕಾವ್ಯನಾಟಕ ವಿಮರ್ಶಾಕೃತಿಗಳು ಆಂಧ್ರ ಸಾಹಿತ್ಯ ವಿದ್ಯಾರ್ಥಿಗಳಿಗೆ, ಅಮೂಲ್ಯ ನಿಧಿಯಂತೆ ವರ್ಣಿತವಾಗಿವೆ. 'ಪ್ರಾಗ್ ನನ್ನಯ ಯುಗಂ ನನ್ನಯ ಭಾರತ', 'ಆಂಧ್ರ ವಾಙ್ಮಯ ಚರಿತ್ರೆ', 'ಸಾಹಿತ್ಯ ಸೋಪಾನಗಳು', 'ಆಂಧ್ರ ಭಾರತ ಕವಿತೆ' ಮೊದಲಾದವು ಅವರ ಸಂಶೋಧನಾ ವಿಮರ್ಶೆಗಳಿಗೆ ಕನ್ನಡಿಯಾಗಿ ಉಳಿದಿವೆ. ಅವರ ಗದ್ಯ ಕೃತಿಗಳೂ, ಕಾವ್ಯನಾಟಕಗಳೂ ತೆಲುಗು ವಿದ್ಯಾರ್ಥಿಗಳಿಗೆ ಅತಿ ಆಪ್ಯಾಯಮಾನವಾದವು.

ಆಂಧ್ರಪ್ರದೇಶದ ಸಾಹಿತ್ಯ ಅಕಾಡಮಿಯ, ಕೇಂದ್ರಸಾಹಿತ್ಯ ಅಕಾಡಮಿಯ, ಜ್ಞಾನಪೀಠ ಪ್ರಶಸ್ತಿ ಸಮಿತಿಯ ಸದಸ್ಯರಾಗಿಯೂ, ತಿ. ತಿ. ದೇವಸ್ಥಾನಗಳ ಧಾರ್ಮಿಕ ಕೃತಿಗಳ ಲೇಖಕ ಸಹಾಯ ಯೋಜನೆಯ ಸದಸ್ಯರಾಗಿಯೂ ಅವರು ಸಲ್ಲಿಸಿದ ಸೇವೆ ನಾಡು, ನುಡಿ, ಧರ್ಮ, ಸಂಸ್ಕೃತಿಗಳ ಅಭಿಮಾನಿಗಳು ನೆನಪಿನಲ್ಲಿಟ್ಟುಕೊಳ್ಳುವಂತಹುದು.

ಶತಾವಧಾನ ವಿದ್ಯೆಯಲ್ಲೂ ಹೆಸರು ಹೊಂದಿದ ಶ್ರೀದಿವಾಕರ್ಲ ಅವರು ಉತ್ತಮ ಉಪನ್ಯಾಸಕರೂ ಆಗಿದ್ದರು. ಶ್ರೀವಿಶ್ವನಾಥಸತ್ಯನಾರಾಯಣರ ಶ್ರೀರಾಮಾಯಣ ಕಲ್ಪವೃಕ್ಷಕ್ಕೆ ಅವರು ಮಾಡಿದ ವ್ಯಾಖ್ಯಾನ ಬಹುಜನ ಪ್ರಶಂಸೆ ಪಡೆದದ್ದು, ಸಾಹಿತ್ಯವನ್ನು ಸಾಮಾನ್ಯರಿಗೂ ಅರ್ಥವಾಗುವಂತೆ ವಿವರಿಸುವ ಅವರ ಆಸಕ್ತಿಯನ್ನು ಅವರ ಭುವನವಿಜಯಂ, ಕನಕಾಭಿಷೇಕಂಗಳು ವಿವರಿಸುತ್ತವೆ.

ಶ್ರೀ ದಿವಾಕರ್ಲ ಅವರ ನಿಧನದಿಂದಾಗಿ ತೆಲುಗು ಜನತೆ ಒಬ್ಬ ಅನುಪಮ ಅಧ್ಯಾಪಕನನ್ನು–ಓಜನನ್ನು ಕಳೆದುಕೊಂಡಿದೆಯೆಂದು ವಿವರಿಸಲಾಗಿದೆ. ಅವರ ಆತ್ಮಕ್ಕೆ ಶಾಂತಿಯನ್ನು ಸಪ್ತಗಿರೀಶನು ನೀಡಲೆಂದು ಸಪ್ತಗಿರಿ ಪ್ರಾರ್ಥಿಸುತ್ತದೆ.–ಸ||

## ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ. — ಜನವರಿ 1987**

**ವೈಭವೋತ್ಸವಗಳು**
— ಸಿ. ಗೋವಿಂದಾಚಾರ್ಯ

**ಆಳ್ವಾರರು ಮತ್ತು ಜಗತ್ತು**
— ಡಿ. ಕೃಷ್ಣಯ್ಯಂಗಾರ್

**ಸಂಭ್ರಮದ ಸಂಕ್ರಾಂತಿ**
— ಸುಮನ ಬದರೀನಾಥ್

**ಕನ್ನಡ ಸಾಹಿತ್ಯದಲ್ಲಿ ಸಂಗೀತ**
— ಡಾ॥ ಎನ್. ಅನಂತರಂಗಾಚಾರ್ಯ

**ಕ್ಷಮೆ**
— ಮತ್ತೀಗೆರೆ ಅನಂತು

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ : ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿಗಳು

ನವೆಂಬರ್ 1 ರ ಕರ್ನಾಟಕ ರಾಜ್ಯೋತ್ಸವದಂದು ಕರ್ನಾಟಕ ಸರ್ಕಾರ ನಾಡು, ನುಡಿ, ಧರ್ಮ, ಸಂಸ್ಕೃತಿ, ವಿಜ್ಞಾನ, ಕಲೆ, ಆಟೋಟ, ಸಮಾಜಸೇವಾ ರಂಗಗಳಲ್ಲಿ ದುಡಿದು ಖ್ಯಾತನಾಮರಾದ ಐವತ್ತೆರಡುಮಂದಿ ಹಿರಿಯರಿಗೆ ಸನ್ಮಾನ ಮಾಡಿತು. ಇವರಲ್ಲಿ ಸರ್ವಶ್ರೀ ಮಲ್ಲಿಕಾರ್ಜುನ ಮನ್ಸೂರ್ ಬಸವರಾಜ ರಾಜಗುರು, ಕೆ. ಕೆ. ಶ್ರೀಕಂಠನ್, ಸಿ. ಹೊನ್ನಪ್ಪಭಾಗವತರ್, ಘಟಂ ಮಂಜುನಾಥ್, ಎಚ್. ಪಿ. ರಾಮಾಚಾರ್ (ಸಂಗೀತ) ಶ್ರೀಮತಿ ಮಾಯಾರಾವ್ (ನೃತ್ಯ) ಮೈಸೂರುಅನಂತಸ್ವಾಮಿ, ಸಿ. ಅಶ್ವತ್ಥ (ಸುಗಮ ಸಂಗೀತ) ಬಾಳಪ್ಪ ಹುಕ್ಕೇರಿ (ಜಾನಪದ ಸಂಗೀತ) ಭದ್ರಗಿರಿ ಕೇಶವದಾಸ್ (ಹರಿಕಥೆ) ಜೋಳದರಾಶಿ ದೊಡ್ಡನ ಗೌಡ (ಗಮಕ) ಪ್ರೊ॥ ಎಸ್. ಕೆ. ರಾಮಚಂದ್ರರಾವ್ (ಸಂಶೋಧನೆ) ಪ್ರೊ॥ ಎಂ. ಗೋಪಾಲಕೃಷ್ಣ ಅಡಿಗ, ಪ್ರೊ॥ ವಿನಾಯಕ ಕೃಷ್ಣ ಗೋಕಾಕ್, (ಸಾಹಿತ್ಯ) ಮೊದಲಾದವರು ಇದ್ದಾರೆ.

ಸರಳ ಸಮಾರಂಭದಲ್ಲಿ ಹಾಜರಿದ್ದ ಸನ್ಮಾನಿತರಿಗೆ ಕರ್ನಾಟಕದ ಮುಖ್ಯ ಮಂತ್ರಿ ಶ್ರೀರಾಮಕೃಷ್ಣ ಹೆಗಡೆ ಅವರು ಶಾಲು ಹೊದಿಸಿ, ಚಿನ್ನದ ಪದಕವನ್ನು ನೀಡಿ ಸನ್ಮಾನಿಸಿದರು.

## ತಿಂಗಳಿನ ಮುಖ್ಯ ದಿನಗಳು

### ಜನವರಿ 1987

| | | |
|---|---|---|
| 10. | ಶನಿವಾರ | ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಆರಂಭ.ವೈಕುಂಠಏಕಾದಶಿ. ಗೀತಾಜಯಂತಿ |
| 11. | ಭಾನುವಾರ | ಸ್ವಾಮಿ ಪುಷ್ಕರಿಣೀ ತೀರ್ಥ ಮುಕ್ಕೋಟಿ |
| 13. | ಮಂಗಳವಾರ | ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಆರ್ದ್ರಾದರ್ಶನೋತ್ಸವ |
| 14. | ಬುಧವಾರ | ಭೋಗಿ ಹಬ್ಬ |
| 15. | ಗುರುವಾರ | ಮಕರ ಸಂಕ್ರಮಣ,ತಿರುಮಲೆಯಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಪ್ರಣಯ ಕಲಹೋತ್ಸವ |
| 16. | ಶುಕ್ರವಾರ | ಶ್ರೀ ಗೋದಾ ಪರಿಣಯೋತ್ಸವ |
| 18. | ಭಾನುವಾರ | ತಿರುಮಳಿಶೈ ಆಳ್ವಾರ್ ವರ್ಷ ತಿರುನಕ್ಷತ್ರ |
| 21. | ಬುಧವಾರ | ಕುರತ್ತಾಳ್ವಾರ್ ವರ್ಷತಿರುನಕ್ಷತ್ರ |
| 29. | ಗುರುವಾರ | ಶ್ರೀ ಗೋವಿಂದರಾಜಸ್ವಾಮಿ ಸನ್ನಿಧಿಯಲ್ಲಿ ಅಧ್ಯಯನೋತ್ಸವಾರಂಭ |

## ಗುರುವಾಯೂರಪ್ಪನಿಗೆ ಪಿ. ಟಿ. ಉಷಾ ಪ್ರಣಾಮಗಳು

ಈಚಿನ ಸಿಯೋಲ್ ಏಷ್ಯಾಡ್‌ನಲ್ಲಿ ಭಾರತದ ಗೌರವ ಪ್ರತಿಷ್ಠೆಗಳನ್ನು ಎತ್ತಿ ಹಿಡಿದು ಓಟದ ರಾಣಿಯೆಂದು ಹೆಸರಾಗಿ, ಚಿನ್ನದ ಪದಕಗಳ ಸರಮಾಲೆಯನ್ನು ಗಳಿಸಿದ ಕುಮಾರಿ ಪಿ. ಟಿ. ಉಷಾ ಕೇರಳದ ಗುರುವಾಯೂರಪ್ಪನನ್ನು ಭಕ್ತಿಯಿಂದ ಆರಾಧಿಸಿ ತಮ್ಮ ತೂಕದ ಸಕ್ಕರೆಯನ್ನು ಸ್ವಾಮಿಗೆ ಸಲ್ಲಿಸಿದರು.

ದೇವಾಲಯದ ಆನೆಗಳೊಂದಿಗೆ ಪಂಚವಾದ್ಯದ ಪರಂಪರೆಯ ಮೆರವಣಿಗೆಯಲ್ಲಿ ದೇವಾಲಯಕ್ಕೆ ಆಗಮಿಸಿದ ಈ ಖ್ಯಾತ ಆಟಗಾರ್ತಿ ತನ್ನ ಎಲ್ಲ ಯಶಸ್ಸಿಗೂ ದೇವರ ಕೃಪೆಯೇ ಮೂಲ ಕಾರಣವೆಂದು ಭಾವಿಸುವರಾಗಿದ್ದು, ಪ್ರತಿ ಸ್ಪರ್ಧೆಯ ವಿಜಯದ ನಂತರವೂ ದೇವರಿಗೆ ನಮನಗಳನ್ನು ಸಲ್ಲಿಸಲು ಆಗಮಿಸುವ ವಾಡಿಕೆ ಹೊಂದಿದ್ದಾರೆ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

